# ಕಂಬಳಿ : ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಸಂಪ್ರಬಂಧ)

ಸಂಶೋಧಕರು

ವಿಜಯಶ್ರೀ ಇಟ್ಟಣ್ಣವರ

ಮಾರ್ಗದರ್ಶಕರು

ಡಾ. ಎಫ್.ಟಿ.ಹಳ್ಳಿಕೇರಿ

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬




ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮



# ಕಂಬಳಿ : ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಸಂಪ್ರಬಂಧ)


ಸಂಶೋಧಕರು

ವಿಜಯಶ್ರೀ ಇಟ್ಟಣ್ಣವರ





ಮಾರ್ಗದರ್ಶಕರು

ಡಾ.ಎಫ್.ಟಿ.ಹಳ್ಳಿಕೇರಿ

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



ಸಿರಿಗನ್ನಡ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ. ಹಂಪಿ.





ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

# ದೃಢೀಕರಣ ಪತ್ರ

ವಿಜಯಶ್ರೀ ಇಟ್ಟಣ್ಣವರ ಇವರು **ಕಂಬಳಿ : ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀ ಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೦೩.೧೦.೨೦೦೮

(ಡಾ. ಎಫ್.ಟಿ.ಹಳ್ಳಿಕೇರಿ)
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪ್ರಮಾಣ ಪತ್ರ

**ಕಂಬಳಿ : ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ಎಫ್.ಟಿ. ಹಳ್ಳಿಕೇರಿಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ವಿಜಯಶ್ರೀ ಇಟ್ಟಣ್ಣವರ)
ಸಂಶೋಧಕರು

ಸ್ಥಳ : ವಿದ್ಯಾರಣ್ಯ
ದಿನಾಂಕ : ೦೩.೧೦.೨೦೦೭

# ಅರಿಕೆ

ಎಂ.ಫಿಲ್ ಅಧ್ಯಯನ ನನ್ನ ಆಲೋಚನೆ ಹಾಗೂ ಬರಹಗಳನ್ನು ಮೊದಲ ಬಾರಿ ಗ್ರಂಥರೂಪದಲ್ಲಿ ತರಲು ಕಾರಣೀಭೂತವಾದ ಪದವಿ. ತನ್ಮೂಲಕ ನನ್ನ ಪಾಲಿಗೆ ಇದು ಬರೀ ಶೈಕ್ಷಣಿಕ ಪದಪಿಯಾಗಿರದೇ ಒಂದು ವಿಷಯದ ಕುರಿತಾದ ನಮ್ಮ ಜ್ಞಾನವನ್ನು ಒರೆಗೆ ಹಚ್ಚುವುದನ್ನು ಕಲಿಸಿಕೊಡುವ ಪ್ರಕ್ರಿಯೆಯಾಗಿದೆ.

ನಾನು ಅಧ್ಯಯನಕ್ಕೆ ತೊಡಗಿದಾಗ ಸಂಪ್ರಬಂಧದ ಬರವಣಿಗೆಯುದ್ದಕ್ಕೂ ನನ್ನ ಕಿರಿಕಿರಿಯನ್ನು ಸಹಿಸಿಕೊಂಡು ತಾಳ್ಮೆಯಿಂದಲೇ ಮಾರ್ಗದರ್ಶನ ಮಾಡಿರುವ ಡಾ.ಎಫ್.ಟಿ.ಹಳ್ಳಿಕೇರಿಯವರಿಗೆ ನನ್ನ ವಂದನೆಗಳು ಸಲ್ಲುತ್ತವೆ. ಪ್ರಬಂಧದ ಪ್ರಕರಣಗಳನ್ನು ನಿಶ್ಚಯಿಸುವಲ್ಲಿ, ಆಕರ ಗ್ರಂಥಗಳನ್ನು ಸೂಚಿಸುವಲ್ಲಿ ಅವರು ತೋರಿದ ಮಾರ್ಗದರ್ಶನ ನನ್ನ ಅಧ್ಯಯನಕ್ಕೊಂದು ಖಚಿತತೆಯನ್ನು ತಂದುಕೊಟ್ಟಿದೆ.

ವಿಭಾಗದ ಮುಖ್ಯಸ್ಥರಾದ ಡಾ.ಎಸ್.ಎಸ್.ಅಂಗಡಿ, ಅಧ್ಯಾಪಕರುಗಳಾದ ಡಾ.ವೀರೇಶ ಬಡಿಗೇರ ಮತ್ತು ಡಾ.ಚನ್ನವೀರಪ್ಪ ಅವರ ಆತ್ಮೀಯ ಸಹಕಾರಕ್ಕೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ತೀರ ಅಪರಿಚಿತವಾದ ಕನ್ನಡ ವಿಶ್ವವಿದ್ಯಾಲಯದ ಆವರಣ ಮೊದಲ ದಿನವೇ ಆತ್ಮೀಯವಾಗುವಂತೆ ಮಾಡಿದ ಈ ಮೊದಲಿನ ಕುಲಸಚಿವರಾದ ವ್ಹಿ.ಶಂಕರ್‌ರವರ ಸೌಜನ್ಯದ ಆತ್ಮೀಯತೆ ಮರೆಯದಂತಹುದು. ಜೊತೆಗೆ ಡಾ.ರಹಮತ್ ತರೀಕೆರೆ, ಡಾ.ಕೆ.ಎಂ.ಮೈತ್ರಿಯವರ ಔದಾರ್ಯ ಸ್ಮರಣಾರ್ಹ.

ಅಧ್ಯಯನದಲ್ಲಿ ಆಸಕ್ತಿಯನ್ನು, ಹೊಸ ಬಗೆಯ ಆಲೋಚನಾ ರೀತಿಯನ್ನು ಹುಟ್ಟುಹಾಕಿದ ಗುರುಗಳಾದ ಡಾ.ಜಿ.ವೀರಭದ್ರಗೌಡ ಹಾಗೂ ಡಾ.ವೆಂಕಟಗಿರಿ ದಳವಾಯಿ ಅವರ ಅಭಿಮಾನಕ್ಕೆ ಋಣಿಯಾಗಿದ್ದೇನೆ. ಈ ಅಧ್ಯಯನದಲ್ಲಿ ನನಗಿಂತಲೂ ಹೆಚ್ಚಿನ ಆಸಕ್ತಿ, ಕುತೂಹಲಗಳನ್ನು ಬೆಳೆಸಿಕೊಂಡು ಅಧ್ಯಯನಕ್ಕೆ ಬೆಂಗಾವಲಾಗಿ ನಿಂತಿರುವದು ನನ್ನ ಕುಟುಂಬವರ್ಗ. ಬೌದ್ಧಿಕ ಹಾಗೂ ಮಾನಸಿಕ ಸಾಮರ್ಥ್ಯಕ್ಕೆ ಒತ್ತಾಸೆಯಾಗಿ ನಿಂತವರು ಅಮ್ಮ, ಅಪ್ಪಾಜಿಯರಾದ ಸರೋಜ, ಡಾ.ಶ್ರೀರಾಮ ಇಟ್ಟಣ್ಣವರ ಹಾಗೂ ತಮ್ಮ ಡಾ.ನಿರಂಜನ ಅವರ ಪ್ರೀತಿಗೆ ಮಣಿಯುತ್ತೇನೆ. ಪ್ರಾರಂಭದಿಂದಲೂ ಪ್ರೀತಿಪೂರ್ವಕ ನಿರೀಕ್ಷೆಯನ್ನಿಟ್ಟುಕೊಂಡು ಸದಾ ನನ್ನ ಏಳ್ಗೆಯನ್ನೇ ಬಯಸುತ್ತಿದ್ದ, ಅಧ್ಯಯನ ಪೂರ್ಣಗೊಳ್ಳುವ ಹೊತ್ತಿಗೆ ಕಣ್ಮರೆಯಾದ ಅಜ್ಜ ಎಸ್.ಎಚ್. ಗುಂಡಳ್ಳಿ ಹಾಗೂ ಅಜ್ಜಿ ಶಾಂತಾಬಾಯಿ ಗುಂಡಳ್ಳಿ ಚೇತನಗಳಿಗೆ ನಮನಗಳು.

ಅಧ್ಯಯನದ ವಿಷಯ ಸಂಗ್ರಹಣೆಯಲ್ಲಿ ಕೈಗೂಡಿಸಿದ ಕಾಕಂದಿರಾದ ಸಿದ್ಲಿಂಗಪ್ಪ, ಬಸಪ್ಪ, ರಂಗಪ್ಪ, ರೇವಣಸಿದ್ದಪ್ಪ ಹಾಗೂ ಸಹೋದರ ಅಜ್ಜಪ್ಪ, ಗುಂಡಕ್ಕಿ, ಜೋಗಿ, ಖೋತ ಅತ್ತೆ-ಮಾವಂದಿರ ಕಾಳಜಿಗೆ,

ಹೊತ್ತುಗೊತ್ತೆನ್ನದೆ ಯಾವ ಕೆಲಸವನ್ನೇ ಆದರೂ ಬಯ್ಯುತ್ತಲೇ ಪ್ರೀತಿಯಿಂದ ಮಾಡಿಕೊಡುವ ಹನುಮಂತ ಹಲಗಲಿಯವರ ಸೋದರ ವಾತ್ಸಲ್ಯಕ್ಕೆ,

ತಮಗೆ ಆಸಕ್ತಿಯಿಲ್ಲದ ಕ್ಷೇತ್ರವಾದರೂ ಮೇಲಿಂದ ಮೇಲೆ ಬರಬೇಕಾಗಿದ್ದು ಬಗ್ಗೆ ಬೇಸರಿಸಿ ಸಹಾಯಿಸುವ ಡಾ.ಅಶ್ವಿನಿ, ಡಾ.ವೀಣಾರ ಸಖ್ಯದ ಸ್ವಾಂಗತ್ಯಕ್ಕೆ,

ಅಧ್ಯಯನಕ್ಕೆ ಪೂರಕವಾದ ಅನೇಕ ಮಾಹಿತಿಗಳನ್ನೊದಗಿಸಿದ ನೆರೆಯ ಕುಂಬಾರ, ಪೋಳ, ಕೊತ್ತಲಮಠ ಕುಟುಂಬಗಳ ಅಂತಃಕರಣಕ್ಕೆ,

ಗೆಳತಿಯರಾದ ಸುಮಂಗಲಾ ಮೇಟಿ, ರಾಜೇಶ್ವರಿ ಶೀಲವಂತ, ಶಶಿ ಇಂಜಲ, ಸಾವಿತ್ರಿ, ಗಿರಿ, ವಸು ವೈದ್ಯ ಹಾಗೂ ಅನ್ನಪೂರ್ಣ ಗೋಸಬಾಳರ ಗೆಳೆತನಕ್ಕೆ,

ಸ್ನೇಹಿತರಾದ ಬಸವರಾಜ ಕುಂಬಾರ, ಕಿತ್ತೂರ, ಮೂಸಿಗೇರಿ, ಹನಗಂಡಿ, ಮೈಲಾರಪ್ಪ, ಕಂಚಣ್ಣವರ, ತೇಲಿ, ಚೌಬಾರಿ ಮತ್ತು ಚಂದ್ರಪ್ಪ ಸೊಬಟಿಯವರ ಆತ್ಮೀಯತೆಗೆ,

ಕಂಬಳಿಯ ಬಗೆಗಿನ ಅನೇಕ ಮಾಹಿತಿಗಳನ್ನೊದಗಿಸಿದ ಕುಂದರಗಿ, ಬೂದಿಹಾಳದ ಕಂಬಳಿ ನೇಕಾರರಿಗೆ, ಜೊತೆಯಲ್ಲಿ ಬೂದಿಹಾಳದ ಉಣ್ಣೆ ಸಹಕಾರಿ ಸಂಘದ ವಿಷಯ ಒದಗಿಸುವುದರೊಂದಿಗೆ ಕ್ಷೇತ್ರಕಾರ್ಯದಲ್ಲಿ ಸಹಕಾರ ನೀಡಿದ ಸಂಘದ ಕಾರ್ಯದರ್ಶಿ ಕರಿಯಪ್ಪ ಹಾದಿಮನಿಯವರಿಗೆ,

ಅಂದವಾಗಿ ರೇಖಾಚಿತ್ರಗಳನ್ನು ತೆಗೆದುಕೊಟ್ಟ ಕಲಾವಿದರಾದ ಶಿವಾನಂದ ಹಿರೇಮಠರಿಗೆ,

ಸಂಪ್ರದಾಯದ ಕುರಿತಾದ ಛಾಯಾಚಿತ್ರಗಳನ್ನು ಬಳಸಿಕೊಳ್ಳಲು ಅನುವು ಮಾಡಿಕೊಟ್ಟ ರಶ್ಮಿ ಕೊತ್ತಲಮಠ, ಛಾಯಾಚಿತ್ರ ಹಾಗೂ ರೇಖಾಚಿತ್ರಗಳನ್ನು ತಾಳ್ಮೆಯಿಂದ ಅಂದವಾಗಿ ಜೋಡಿಸಿಕೊಟ್ಟ ವಿಜಯಕುಮಾರ ಸೋಮಣ್ಣವರ ಅವರಿಗೆ,

ಅಚ್ಚುಕಟ್ಟಾಗಿ ಡಿ.ಟಿ.ಪಿ. ಮಾಡಿಕೊಟ್ಟ ಹೊಸಪೇಟೆಯ ಯಾಜಿ ಗ್ರಾಫಿಕ್ಸ್‌ನ ಗಣೇಶ್ ಯಾಜಿ ಹಾಗೂ ಸವಿತಾ ಯಾಜಿಯವರಿಗೆ

- ಈ ಎಲ್ಲರಿಗೂ ನಾನು ಕೃತಜ್ಞಳಾಗಿದ್ದೇನೆ.

**ವಿಜಯಶ್ರೀ ಇಟ್ಟಣ್ಣವರ**

ಹಂಗನ್ನಡ ಗ್ರಂಥಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

# ಅಧ್ಯಾಯ ೧

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ

ಜನಪದರ ಸಾಮಾಜಿಕ, ಧಾರ್ಮಿಕ ಜೀವನದಲ್ಲಿ ಕಂಬಳಿ ಮಹತ್ತರ ಪಾತ್ರವಹಿಸುತ್ತದೆ. ನಾಗರಿಕ ಜಗತ್ತು ರೂಪುಗೊಳ್ಳುವ ಮೊದಲು ಅಲೆಮಾರಿ ಜನಾಂಗದ ಜೀವನಾವಶ್ಯಕ ವಸ್ತುವಾಗಿದ್ದ ಕಂಬಳಿ ಕಾಲಾಂತರದಲ್ಲಿ ಕುರಿ ಕಾಯುವ ವೃತ್ತಿಯನ್ನವಲಂಬಿಸಿದ ಕುರುಬರ ವೈಶಿಷ್ಟ್ಯವೆನಿಸಿ ಕ್ರಮೇಣ ಅನ್ಯ ಸಮುದಾಯಗಳು ಇದನ್ನು ಭೌತಿಕವಾಗಿ, ಭಾವನಾತ್ಮಕವಾಗಿ ಆಶ್ರಯಿಸುವಂತಾದುದು ಕುತೂಹಲಕಾರಿಯಾದ ವಿಷಯ. ಈ ನಡೆಯಲ್ಲಿ ಕಂಬಳಿಯ ಸುತ್ತ ಹರಡಿಕೊಂಡ ಸಂಪ್ರದಾಯ-ಆಚರಣೆ-ನಂಬಿಕೆಗಳ ಸಂಗಡವೇ ಇದೊಂದು ಉದ್ಯಮವಾಗಿ ಬೆಳೆದು ಬಂದ ಬಗೆ, ಇಷ್ಟಲ್ಲದೆ ಕಂಬಳಿಯನ್ನು ಕುರಿತಾಗಿ ಸೃಷ್ಟಿಗೊಂಡ ಹಾಡುಗಳು ಇವೆಲ್ಲ ಅಧ್ಯಯನ ಯೋಗ್ಯವಾಗಿವೆ. ಕಂಬಳಿಯನ್ನು ಒಂದು ಅಧ್ಯಯನ ಶಿಸ್ತಿಗೆ ಒಳಪಡಿಸುವುದಾದರೆ ಇದರ ವ್ಯಾಪ್ತಿಯನ್ನು ಸಾಂಸ್ಕೃತಿಕವಾಗಿಯೇ ಕಟ್ಟಿಕೊಳ್ಳುವುದು ಯೋಗ್ಯವೆನಿಸುತ್ತದೆ.

ಕಂಬಳಿಯನ್ನು ಮುಖ್ಯವಾಗಿ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ಪ್ರಸ್ತುತ ಸಂಪ್ರಬಂಧದ ಉದ್ದೇಶವಾಗಿದೆ. ಕಾರಣ ಕಂಬಳಿ ಕೇವಲ ಹಾಸಿಕೊಳ್ಳುವ, ಹೊದೆದುಕೊಳ್ಳುವ ಸಾಮಾನ್ಯ ವಸ್ತುವಲ್ಲ. ಸಾಮಾಜಿಕ ನಡವಳಿಕೆಯಲ್ಲಿ, ಧಾರ್ಮಿಕ ಕ್ರಿಯಾಚರಣೆಗಳಲ್ಲಿ ಇದಕ್ಕೊಂದು ಮನ್ನಣೆಯಿರುವುದರಿಂದ ಇದರ ಸಾಮಾಜಿಕ ಅಸ್ತಿತ್ವ ವಿಶೇಷವಾಗಿ ಭಾವ ಜಗತ್ತಿನೊಂದಿಗೆ ತಳಕು ಹಾಕಿಕೊಳ್ಳುತ್ತದೆ. ಆದ್ದರಿಂದ ಕಂಬಳಿಯ ಅಧ್ಯಯನದ ಉದ್ದೇಶದಲ್ಲಿ ಸಾಂಸ್ಕೃತಿಕ ಆಶಯಗಳೇ ಪ್ರಮುಖ ಕಾಳಜಿಗಳಾಗುತ್ತವೆ.

ಪ್ರಸ್ತುತ ಸಂಪ್ರಬಂಧವು ೫ ಅಧ್ಯಾಯಗಳಲ್ಲಿ ವ್ಯಾಪಿಸಿದೆ. ಪ್ರತಿಯೊಂದು ಅಧ್ಯಾಯವೂ ಶಿರೋನಾಮದ ಆಚೀಚೆ ಹೋಗದಂತೆ ಎಚ್ಚರಿಕೆ ವಹಿಸಲಾಗುವುದು. ಕಂಬಳಿ ಜಾನಪದರ ಜೀವನದಲ್ಲಿ ಹರಹಿಕೊಂಡ ವ್ಯಾಪ್ತಿ ಬಹಳ ದೊಡ್ಡದು. ಜನಸಾಮಾನ್ಯರು ಚಳಿ-ಮಳೆ-ಗಾಳಿಗಳ ರಕ್ಷಣೆಗೆ ಹೊದ್ದುಕೊಳ್ಳುವುದರಿಂದ ಹಿಡಿದು ದೇವರ ಕಂಥೆಯವರೆಗೆ ಇದರ ವ್ಯಾಪ್ತಿಯಿದೆ. ಕಂಬಳಿಯ ಉಪಯೋಗ, ಆ ವಿಷಯದಲ್ಲಿ ಜನಪದರು ಇರಿಸಿಕೊಂಡ ಶ್ರದ್ಧೆ, ಕಂಬಳಿ ಉದ್ಯಮವಾಗಿ ಬೆಳೆದು ಬಂದ ಬಗೆ ಇವೆಲ್ಲ ತುಂಬ ವಿಸ್ತೃತ ವಿಷಯ ಗಳಾಗಿರುವುದರಿಂದ ಅಧ್ಯಯನದ ವ್ಯಾಪ್ತಿಯನ್ನು ಮುಂದಿನ ಪ್ರಕರಣಗಳಿಗೆ ಹಿಗ್ಗಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕಂಬಳಿಯೆಂದರೇನು? ಅದನ್ನು ಕುರಿತಾಗಿ ಈಗಾಗಲೇ ಬಂದಿರುವ ವ್ಯಾಖ್ಯೆಗಳು ಯಾವುವು? ಎಂಬುದನ್ನು ಮೊದಲು ಹೇಳಿ ತರುವಾಯ ಕಂಬಳಿ ಕುರಿತಾದ ಇದುವರೆಗಿನ ಉಲ್ಲೇಖಗಳನ್ನು ಪ್ರಸ್ತಾಪಿಸಲಾಗುವುದು. ಅರ್ಥ-ವ್ಯಾಖ್ಯೆಗಳ ವಿವರಣೆಯಲ್ಲಿ ಪ್ರಸಿದ್ಧ ಲೇಖಕರ ಹೇಳಿಕೆಗಳು ಒಳಗೊಳ್ಳುತ್ತವೆ. ಇಲ್ಲಿ ವಿವರಿಸಲ್ಪಡುವ ಉಲ್ಲೇಖಗಳು ಒಂದು ರೀತಿಯಲ್ಲಿ ಕಂಬಳಿಯ ಇತಿಹಾಸವನ್ನೇ ಹೇಳುತ್ತವೆ. ಕಂಬಳಿಯನ್ನು ಕುರಿತಾದ ಪುರಾಣಾಂತರ್ಗತ ವಿಷಯಗಳು, ಐತಿಹಾಸಿಕ ಟಿಪ್ಪಣಿ ಇವೆಲ್ಲ ಕಂಬಳಿಯ ಪ್ರಾಚೀನತೆಯನ್ನು ಸಾದರಪಡಿಸುತ್ತವೆ. ತಮ್ಮ ಜೀವನೋಪಾಯಕ್ಕೆ ಆಧಾರವಾಗಿರುವ ಕುರಿಯನ್ನು 'ಲಕ್ಷ್ಮೀ' ಎಂದು ಭಾವಿಸುವ ಕುರುಬರು, ಕುರಿಯ ಉಣ್ಣೆಯನ್ನು, ತನ್ಮೂಲಕ ಉತ್ಪಾದನೆಗೊಳ್ಳುವ ಕಂಬಳಿಯನ್ನು ಶ್ರದ್ಧಾಭಕ್ತಿಯಿಂದ ಕಾಣುತ್ತ ಬಂದವರು. ಅವರ ಈ ಭಾವುಕತೆಯೇ ಕಂಬಳಿಯನ್ನು ಪುರಾಣಗಳಿಗೆ ತಳಕು ಹಾಕಿರಬೇಕು. ಐತಿಹಾಸಿಕ ನೆಲೆಯಲ್ಲಿ ಕಂಬಳಿಯ ಉತ್ಪಾದನೆ, ವ್ಯಾಪಾರ, ಉಪಯೋಗ ಮುಂತಾದವುಗಳು ಸೇರ್ಪಡೆಗೊಳ್ಳುತ್ತವೆ. ಇಂದಿನ ಕಂಬಳಿ ಉದ್ದಿಮೆ ಒಂದೇ ದಿನದ ಬೆಳವಣಿಗೆಯಲ್ಲ, ಇದಕ್ಕೊಂದು ಪ್ರಾಚೀನ ಇತಿಹಾಸವಿದೆ. ಈ ಇತಿಹಾಸ ಸದ್ಯದ ಉದ್ದಿಮೆಯನ್ನು ಅರ್ಥೈಸಿಕೊಳ್ಳಲು ಸಹಾಯಕವಾಗುತ್ತದೆ. ಈ ಉಲ್ಲೇಖಗಳು ಅನುಷಂಗಿಕವಾಗಿ ಕುರಿ, ಉಣ್ಣೆ, ಕುರಿಸಾಕಣೆ ಬಗ್ಗೆಯೂ ಹೇಳುವುದರಿಂದ ಆಯಾ ಕಾಲದ ಕುರುಬ ಜನಾಂಗದವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಯ ಬಗೆಗೂ ವಿಷಯವನ್ನು ಸಂಗ್ರಹಿಸಿಕೊಡುವುದರಿಂದ ಅಧ್ಯಯನ ವ್ಯಾಪ್ತಿಯಲ್ಲಿ ಇವುಗಳಿಗೆ ತನ್ನದೇ ಆದ ಮಹತ್ವವಿದೆ. ಉಲ್ಲೇಖಗಳ ಪ್ರಸ್ತಾವನೆಯಲ್ಲಿ ಕಾಲಕ್ರಮವನ್ನು ಅನುಸರಿಸಲಾಗುವುದು. ಮೊದಲು ಪುರಾಣ ಎರಡನೇ ಹಂತದಲ್ಲಿ ಇತಿಹಾಸದ ವಿಷಯಗಳನ್ನು ವಿಶದೀಕರಿಸಿ ತರುವಾಯ ವರ್ತಮಾನಕ್ಕೆ ಬರಲಾಗುವುದು. ಇಂತಹ ಕ್ರಮದಿಂದ ಜನಜೀವನದಲ್ಲಿಯ ಕಂಬಳಿಯ ಅಸ್ತಿತ್ವವನ್ನು ಹಂತಹಂತವಾಗಿ ಗುರುತಿಸಿದಂತಾಗುತ್ತದೆ. ಇದರಿಂದ ಮೊದಲು ವಿವರಿಸಿದ ಅರ್ಥ, ವ್ಯಾಖ್ಯೆಗಳಿಗೆ ಒಂದು ಅರ್ಥವಂತಿಕೆ ಪ್ರಾಪ್ತವಾಗುವುದು.

ಉಲ್ಲೇಖಗಳನ್ನು ವಿವರಿಸುವಲ್ಲಿ ಮಹತ್ವದ ಗ್ರಂಥಗಳನ್ನು ಪರಿಶೀಲಿಸುವುದು ಬಹಳ ಮುಖ್ಯ. 'ಸ್ಕಾಂದ ಪುರಾಣ', 'ಮನುಸ್ಮೃತಿ', 'ಕೌಟಿಲ್ಯನ ಅರ್ಥಶಾಸ್ತ್ರ'ದಂತಹ ಗ್ರಂಥಗಳಲ್ಲಿ ದೊರೆಯುವ ಉಲ್ಲೇಖಗಳು ಭಾರತ ವ್ಯಾಪ್ತಿ ಉಲ್ಲೇಖಗಳೆನಿಸುತ್ತವೆ. 'ಹಾಲ್ಮತೋತ್ತೇಜಕ ಪುರಾಣ', 'ಜನಪದ ಹಾಲುಮತ ಮಹಾಕಾವ್ಯ'ದಂಥ ಗ್ರಂಥಗಳಲ್ಲಿನ ಉಲ್ಲೇಖಗಳು ಕನ್ನಡ ಪ್ರಾದೇಶಿಕ ನೆಲೆಯಲ್ಲಿ ಮಹತ್ವವೆನಿಸುತ್ತವೆ. ಉಲ್ಲೇಖಗಳಿಗೆ ಆಧಾರವಾಗಿ ಇಂತಹ ಗ್ರಂಥಗಳನ್ನು ಇಟ್ಟುಕೊಳ್ಳುವುದರಿಂದ ಕಂಬಳಿಯ ಪ್ರಾಚೀನತೆಯ ದೃಷ್ಟಿಯಿಂದಲೂ ಇವು ಮಾನದಂಡಗಳಾಗುತ್ತವೆ. ಶಾಸನಾಧಾರಿತ ಉಲ್ಲೇಖಗಳಂತೂ ಕಂಬಳಿಯ ಅಸ್ತಿತ್ವ ವನ್ನು ಇನ್ನೂ ನಿಖರಗೊಳಿಸುತ್ತವೆ.

ಮೂರನೆಯ ಅಧ್ಯಾಯ ಪ್ರಬಂಧದ ಹೃದಯ ಭಾಗವೆನಿಸುತ್ತದೆ. ಜನಪದರ ಸಂಪ್ರದಾಯ-ಆಚರಣೆ -ನಂಬಿಕೆಗಳಲ್ಲಿ ಕಂಬಳಿ ಹಾಸುಹೊಕ್ಕಾಗಿದೆ. ಜನಪದರ ಶುಭಪ್ರಸಂಗಗಳಲ್ಲಿ, ಕೃಷಿಗೆ ಸಂಬಂಧಿಸಿದ

ಆಚರಣೆಗಳಲ್ಲಿ ಕಂಬಳಿಗಿರುವ ಸ್ಥಾನ ತುಂಬ ವಿಶಿಷ್ಟವಾಗಿರುತ್ತದೆ. ಮದುವೆ-ಸೀಮಂತ ಮುಂತಾದ ಮಂಗಲ ಪ್ರಸಂಗಗಳು ಕಂಬಳಿ ಇರಲಾರದೇ ಮುಂದುವರಿಯುವುದಿಲ್ಲ. ಕಂಬಳಿಯ ಬಗೆ, ಅದನ್ನು ಹಾಸುವ ವಿಧಾನಗಳೆಲ್ಲ ಇಂತಹ ಪ್ರಸಂಗಗಳಲ್ಲಿ ಮುಖ್ಯವೆನಿಸುತ್ತವೆ. ದೈವನಿಷ್ಠವಾದ ಜನಪದರ ಬದುಕು ದೇವಸಂಬಂಧದಲ್ಲಿಯೂ ಕಂಬಳಿಗೆ ಪ್ರಮುಖ ಸ್ಥಾನ ನೀಡಿದೆ. ಇಂಥ ದೇವರಿಗೆ ಇಷ್ಟೇ ಏಡಿನ ಜಾಡಿ, ಅದನ್ನು ಪೂಜಾರಿಗಳು ಉಪಯೋಗಿಸುವ ರೀತಿ, ಆರಾಧಿಸುವ ವಿಧಾನ ಮುಂತಾದವುಗಳಲ್ಲಿ ಅವರ ಶ್ರದ್ಧೆ, ಆಚರಣೆ, ನಂಬಿಕೆಗಳು ಒಡೆದು ತೋರುತ್ತವೆ. ದೇವರಿಗೆಂದೇ ಸೃಷ್ಟಿಗೊಳ್ಳುವ ಜಾಡಿ, ಕಂಥೆಗಳ ತಯಾರಿಕೆ, ಉಪಯೋಗಗಳಲ್ಲಿ ಪಾಲಿಸಲ್ಪಡುವ ಸಂಪ್ರದಾಯ, ವಿಧಿ-ನಿಷೇಧಗಳ ಪರಿಕಲ್ಪನೆಯಂತೂ ತುಂಬ ವಿಶಿಷ್ಟ. ಇಲ್ಲೆಲ್ಲ ಕಂಬಳಿಯ ವಿಷಯದಲ್ಲಿ ಜನಪದರು ಇರಿಸಿಕೊಂಡಿರುವ ಅಲೌಕಿಕ ಶ್ರದ್ಧೆ, ತಾಳ್ಮೆಗಳು ಬೆರಗುಗೊಳಿಸುತ್ತವೆ. ಕಂಬಳಿಯೆನ್ನುವದು ಅವರಿಗೆ ಕೇವಲ ಜಡವಸ್ತುವಲ್ಲ, ಅನೇಕ ಸಂದರ್ಭಗಳಲ್ಲಿ ಚೇತನ ಶಕ್ತಿಯಾಗಿ ದೇವರನ್ನು ಪ್ರತಿನಿಧಿಸುತ್ತದೆ. ಆಧುನಿಕ ಯುಗದಲ್ಲಿಯೂ ನಮ್ಮವರು ಅನೇಕ ಸಂಪ್ರದಾಯಗಳಲ್ಲಿ ಕಂಬಳಿಯನ್ನು ಮುಂದುವರಿಸಿಕೊಂಡು ಬಂದಿರುವುದು ಕಂಬಳಿ ವಿಷಯದಲ್ಲಿ ಅವರು ಇರಿಸಿಕೊಂಡಿರುವ ನಿಷ್ಠೆಯನ್ನು ಅನಾವರಣಗೊಳಿಸುತ್ತದೆ.

ಕೃಷಿ ಸಂಬಂಧೀ ಸಂಪ್ರದಾಯಗಳಲ್ಲೂ ಕಂಬಳಿ ಉಪಯೋಗ ಒಡೆದು ತೋರುತ್ತದೆ. ವಿಶೇಷವಾಗಿ ಉತ್ತರ ಕರ್ನಾಟಕದ ರಾಶಿ ಸಂದರ್ಭದಲ್ಲಿ ಕಂಬಳಿಯ ಸುತ್ತ ಹೆಣೆದುಕೊಂಡಿರುವ ಭಾವನಾತ್ಮಕ ನಂಬಿಕೆಗಳು ಕುತೂಹಲಕಾರಿಯಾಗಿದ್ದು ಅವೆಲ್ಲವುಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಬಹಳ ಮುಖ್ಯವಾದ ಅಂಶವೆಂದರೆ ಕಂಬಳಿಗೆ ಜಾತಿಲೇಪವಿಲ್ಲ. ಜನಪದರು ಅನೇಕ ಸಂದರ್ಭಗಳಲ್ಲಿ ಜಾತಿಯ ಕಟ್ಟುಪಾಡುಗಳನ್ನು ಕಟ್ಟುನಿಟ್ಟಾಗಿ ಪರಿಪಾಲಿಸಿದರೂ ಕಂಬಳಿಯ ವಿಷಯದಲ್ಲಿ ಮುಕ್ತಮನೋಭಾವ ಹೊಂದಿದ್ದಾರೆ. ಮೂಲತಃ ಕಂಬಳಿ ಕುರಿಗಾರರದು, ಕುರುಬರದು ಎಂದಿದ್ದರೂ ಶುಭಪ್ರಸಂಗ, ಕೃಷಿಸಂಬಂಧದ ಆಚರಣೆ ಯಾವ ಮತದವರ ಮನೆ-ಹೊಲಗಳಲ್ಲಿಯೇ ಇರಲಿ ಅಲ್ಲೆಲ್ಲ ಕಂಬಳಿಗೆ ಸಂಬಂಧಿಸಿದ ವಿಧಿ ವಿಧಾನಗಳು ಶ್ರದ್ಧಾಪೂರ್ವಕವಾಗಿಯೇ ನಡೆಯುತ್ತವೆ. ಹೀಗೆ ಒಂದರ್ಥದಲ್ಲಿ ಕಂಬಳಿಯೆನ್ನುವುದು ಎಲ್ಲ ಮತದವರಿಗೂ ಬೇಕಾಗಿ ಭಾವೈಕ್ಯತೆಯ ಹರಿಕಾರನಂತೆ ಓಡಾಡುತ್ತದೆ. "ನಮ್ಮ ಪ್ರಬಂಧಗಳು ಕೇವಲ ಅಕಾಡೆಮಿಕ್ ಆಗಿರದೇ ಅಪ್ಲೈಯಡ್ ಆಗಿರಬೇಕು" (ಪ್ರೊ.ಎಸ್.ಹಿಪ್ಪರಗಿ) ಎನ್ನುವುದಾದಲ್ಲಿ ಕಂಬಳಿ ಅಧ್ಯಯನದ ಸಂದರ್ಭದಲ್ಲಿ ಅದು ಪ್ರಸ್ತುತವಾಗುತ್ತದೆ.

ಕಂಬಳಿ ಅನೇಕ ಜನರ ಜೀವನೋಪಾಯದ ಸಾಧನವೂ ಆಗಿರುವ ವಿಷಯವನ್ನು ನಾಲ್ಕನೆಯ ಅಧ್ಯಾಯದಲ್ಲಿ ವಿವರಿಸಲಾಗುವುದು. ಮುಂಚಿನ ಕಾಲಕ್ಕೆ ಅನೇಕ ಹಳ್ಳಿಗಳಲ್ಲಿ ಕಂಬಳಿ ನೇಯುವ ಮಗ್ಗಗಳಿದ್ದವು. ಕಂಬಳಿಗೆ ಅವಶ್ಯಕವಾಗಿರುವ ಉಣ್ಣೆಯನ್ನು ಗ್ರಾಮೀಣ ಮಟ್ಟದಲ್ಲಿಯೇ ಆಸುಪಾಸಿನ ಕುರಿಗಾರರಿಂದ ಸಂಗ್ರಹಿಸಿಕೊಳ್ಳಲಾಗುತ್ತಿತ್ತು. ಬಿಂಗರಿ ಮುಖಾಂತರ ಎಳೆ ತೆಗೆದು ಸಂಗ್ರಹಿಸಿ ಹಾಸು

ಹೋದುಕೊಂಡು ತರುವಾಯ ಮಗ್ಗಕ್ಕೆ ಅಳವಡಿಸಿ ಕಂಬಳಿ ನೇಯಲಾಗುತ್ತಿತ್ತು. ಸಾಮಾನ್ಯವಾಗಿ ಊರ ಜನರೇ ಮುಂಚಿತವಾಗಿ ಹೇಳಿ ನೇಯಿಸಿ ಕಂಬಳಿಗಳನ್ನು ಖರೀದಿಸುತ್ತಿದ್ದರು. ಇಷ್ಟಾಗಿಯೂ ಕಂಬಳಿ ಉಳಿದರೆ ಪಕ್ಕದ ಪಟ್ಟಣಗಳಿಗೆ ಹೋಗಿ ಮಾರಲಾಗುತ್ತಿತ್ತು.

ಇತ್ತೀಚೆಗೆ ಕಂಬಳಿಯ ಸಂಘ(Society)ಗಳು ಅಲ್ಲಲ್ಲಿ ತಲೆಯೆತ್ತಿವೆ. ಕಂಬಳಿ ಸಂಘದ ಮೂಲಕ ವ್ಯವಹರಿಸಬೇಕೆನ್ನುವ ಕಂಬಳಿ ನೇಕಾರನು ಮೊದಲು ಸಂಘದ ಸದಸ್ಯನಾಗಿರಬೇಕು. ಸಂಘದ ವ್ಯವಹಾರ ಎರಡು ಬಗೆ: ೧. ಸಂಘದವರೇ ಉಣ್ಣೆಯನ್ನು ಖರೀದಿಸಿ ಅದನ್ನು ಕಂಬಳಿ ನೇಕಾರರಿಗೆ ಕೊಟ್ಟು ಕಂಬಳಿ ನೇಯಿಸಿ ಅವರಿಂದ ಕಂಬಳಿ ಖರೀದಿಸಿ ಸಂಘದವರೇ ಮಾರುವುದು. ೨. ಸಂಘದವರು ನೇಕಾರರೊಂದಿಗೆ ಉಣ್ಣೆಯ ವ್ಯವಹಾರವನ್ನಿಟ್ಟುಕೊಳ್ಳದೇ ಅವರಿಂದ ಕಂಬಳಿ ಖರೀದಿಸಿ ಮಾರಾಟ ಮಾಡುವುದು.

ಲಾಭದ ವಿಷಯದಲ್ಲಿ ತಾವೇ ಮಾರುವುದಕ್ಕೂ ಸಂಘದ ಮುಖಾಂತರ ಮಾರುವುದಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲವಾದರೂ, ಸಂಘದ ಮುಖಾಂತರ ಯಾವಾಗ ಬೇಕಾದರೂ ಮಾರಿ ಹಣವನ್ನು ಪಡೆಯುವ ಅನುಕೂಲ ಸಾಧ್ಯವಾಗುತ್ತದೆ.

ಕ್ರಮೇಣ ಕಂಬಳಿ ವ್ಯವಸಾಯ ಕುಂಠಿತವಾಗುತ್ತಿದೆ. ಇದಕ್ಕೆ ಉತ್ತರ ಕರ್ನಾಟಕದಲ್ಲಿ ಕೊಡುವ ಮುಖ್ಯವಾದ ಕಾರಣವೆಂದರೆ ಹೆಚ್ಚು ಉಣ್ಣೆಯನ್ನು ಕೊಡುವ ಕುರಿ ತಳಿಗಳು ಕಡಿಮೆಯಾಗಿರುವುದು. ಹೀಗಾಗಿ ಉಣ್ಣೆಯ ಕೊರತೆ ಎದ್ದು ಕಾಣುತ್ತಿದೆ. ಉತ್ತರ ಕರ್ನಾಟಕದಲ್ಲಿ ಕಂಬಳಿ ಉತ್ಪಾದನೆ ಕಡಿಮೆಯಾಗಿರುವುದರಿಂದ ಈ ನೇಕಾರಿಕೆಯನ್ನೇ ಅವಲಂಬಿಸಿದ್ದ ನೇಕಾರರು ಏನಾದರು? ಅವರ ಕುಟುಂಬಗಳ ಇಂದಿನ ಸ್ಥಿತಿಗತಿಗಳೇನು? ಎಂಬ ವಿಷಯವಾಗಿಯೂ ಇಲ್ಲಿ ಚರ್ಚಿಸಲಾಗುವುದು.

ಈ ಪ್ರಕರಣದಲ್ಲಿ ಸಂಗ್ರಹಗೊಳ್ಳುವ ಮುಖ್ಯವಾದ ಇನ್ನೊಂದು ವಿಷಯವೆಂದರೆ ನೇಕಾರಿಕೆಯ ಪರಿಭಾಷೆ, ವಿಶೇಷವಾಗಿ ಕಂಬಳಿ ಮಗ್ಗದ ಬಿಡಿಭಾಗಗಳ ಹೆಸರುಗಳನ್ನು ಕೊಡಲಾಗುವುದು, ಅವುಗಳ ಕಾರ್ಯವನ್ನು ವಿವರಿಸಲಾಗುವುದು. ಯಾಕೆಂದರೆ ಒಂದು ಕಾಲಘಟ್ಟದ ನೇಕಾರಿಕೆಯ ಪಾರಿಭಾಷಿಕ ಪದಗಳನ್ನು ಈ ಮೂಲಕ ಉಳಿಸಿಕೊಟ್ಟಂತಾಗುತ್ತದೆ. ಯಾಂತ್ರಿಕೃತ, ದೇಶೀ ಕಂಬಳಿಗಳನ್ನು ಕುರಿತಲ್ಲದೆ ಆಸ್ಟ್ರೇಲಿಯಾ ಉಣ್ಣೆಯಿಂದ ತಯಾರಾಗುವ ಕಂಬಳಿಗಳನ್ನು ಕುರಿತಾಗಿಯೂ ಈ ಪ್ರಕರಣದಲ್ಲಿ ಚರ್ಚಿಸಲಾಗುವುದು.

ಅಧ್ಯಯನದ ಒಟ್ಟು ವಿಷಯಗಳನ್ನು ಸಮಾರೋಪದಲ್ಲಿ ಸಮೀಕ್ಷಿಸಲಾಗಿದೆ. ಪ್ರಮುಖವಾಗಿ ಕ್ಷೇತ್ರಕಾರ್ಯವನ್ನೇ ಅವಲಂಬಿಸಿ ರೂಪುಗೊಂಡ ಸಂಪ್ರಬಂಧವಿದು. ಆದ್ದರಿಂದ ಕ್ಷೇತ್ರಕಾರ್ಯವನ್ನು ಯಾವ ವಿಧವಾಗಿ ಅನುಸರಿಸಿ ಈ ಪ್ರಬಂಧವನ್ನು ರಚಿಸಲಾಯಿತು ಎಂಬ ವಿಷಯವನ್ನೂ ಸಮಾರೋಪದಲ್ಲಿಯೇ ಹೇಳಲಾಗುತ್ತದೆ.

ಗ್ರಂಥದ ಕೊನೆಯಲ್ಲಿ ಮುಖ್ಯವಾದ ೫ ಅನುಬಂಧಗಳು ಸೇರಿಕೊಳ್ಳುತ್ತವೆ. ಕಂಬಳಿ ಕುರಿತಾದ ಹಾಡುಗಳ ಸಂಗ್ರಹ, ಆಕರ ಗ್ರಂಥಗಳು, ಲೇಖನಗಳು, ಛಾಯಾಚಿತ್ರಗಳು, ರೇಖಾಚಿತ್ರಗಳು, ವಕ್ತೃಗಳ ವಿವರಗಳನ್ನು ನೀಡಲಾಗಿದೆ.

## ಅಧ್ಯಾಯ ೨

# ಕಂಬಳಿ: ಅರ್ಥ, ವ್ಯಾಖ್ಯೆ, ಉಲ್ಲೇಖಗಳು

ಪ್ರಪಂಚದಲ್ಲಿ ಮಾನವ ನಾಗರಿಕತೆಯ ಮೊದಲ ಹಂತ ಪ್ರಾರಂಭವಾಗುವುದೇ ಪಶುಪಾಲನೆಯಿಂದ. ಆದರೆ ಆರಂಭದಿಂದಲೂ ಪಶುಗಳ ಸಂರಕ್ಷಣೆಗಾಗಿಯೇ ಈ ವೃತ್ತಿ ಆರಂಭವಾಯಿತೆಂದು ನಂಬುವುದು ಕಷ್ಟ. ಮನುಷ್ಯ ನಾಗರಿಕನಾಗತೊಡಗಿದಂತೆ ಓಡಾಡಿ ದಣಿದು ಬೇಟೆಯಾಡುವುದನ್ನು ತಪ್ಪಿಸುವುದಕ್ಕಾಗಿ ತಾನಿರುವ ಸ್ಥಳದಲ್ಲೇ ಅವುಗಳನ್ನು ಸಾಕಿ ತನಗೆ ಬೇಕಾದಾಗ ಕೊಂದು ತಿನ್ನುವ ಅನುಕೂಲತೆಗಾಗಿ ಪಶುಪಾಲನೆಯು ಪ್ರಾರಂಭವಾಗಿರಬಹುದು. ಪಶುಪಾಲನೆ ಪ್ರಾರಂಭಿಸುವಾಗ ತನ್ನ ಅನುಕೂಲತೆಗಾಗಿ ಸಾಧು ಪ್ರಾಣಿಗಳನ್ನೇ ಸಾಕಾಣಿಕೆಗೆ ಆಯ್ದುಕೊಂಡ. ಪ್ರಾಣಿಗಳಲ್ಲಿಯೇ ಸೌಮ್ಯಸ್ವಭಾವದ ಕುರಿಗಳನ್ನು ಸಾಕಲಾರಂಭಿಸಿದ. ಕಾರಣ ಹಳ್ಳ-ಕೊಳ್ಳಗಳಲ್ಲಿನ ನೀರು, ಸಾಧಾರಣ ಹುಲ್ಲಿನಿಂದ ಈ ಪ್ರಾಣಿ ಬದುಕಬಲ್ಲುದು. ಅಲ್ಲದೇ ಮನುಷ್ಯ ಅವುಗಳನ್ನು ಸುಲಭವಾಗಿ ಪಳಗಿಸಬಹುದು ಮತ್ತು ಅದರ ಉತ್ಪನ್ನಗಳಿಂದ ತಾನೂ ಬದುಕಬಹುದು ಎಂಬ ತಿಳುವಳಿಕೆ ಅವನಿಗೆ ಪ್ರಧಾನವಾಗಿ ಕುರಿಯನ್ನು ಸಾಕುವಂತೆ ಮಾಡಿತು.

ಮಾನವನ ಮೊದಲ ಅವಶ್ಯಕತೆ ಅನ್ನ, ಅದು ದೊರೆತ ನಂತರ ವಸ್ತ್ರ ಮುಖ್ಯವಾಗುತ್ತದೆ. ಹಾಗಾಗಿಯೇ ಮನುಷ್ಯ ತಾನು ಸಾಕಿದ ಕುರಿಗಳ ಉತ್ಪಾದನೆಯಿಂದ ಹೊಟ್ಟೆ ತುಂಬಿದ ನಂತರದಲ್ಲಿ ಅದೇ ಕುರಿಯ ಚರ್ಮವನ್ನೇ ಬಟ್ಟೆಯಂತೆ ಉಪಯೋಗಿಸಿದ. ಕ್ರಮೇಣ ಕುರಿಯ ತುಪ್ಪಳವನ್ನು ಕತ್ತರಿಸಿ ಅದರ ನೂಲು ತೆಗೆದು ಬಟ್ಟೆಯಂತೆ ನೇಯಬಹುದೆಂದು ಅರಿತುಕೊಂಡ. ಹೀಗೆ ಕುರಿಯ ಉಣ್ಣೆಯಿಂದ ತಯಾರಾಗುವ ವಸ್ತ್ರಗಳಲ್ಲಿ ಮುಖ್ಯವಾದುದು ಕಂಬಳಿ.

ಕಂಬಳಿಯೆನ್ನುವ ಪದ ಮೂಲತಃ ಸಂಸ್ಕೃತದ 'ಕಂಬಲ್' ರೂಪದಿಂದ ಬಂದುದು. ಕಂಬಳಿಯೆನ್ನುವುದು ಕನ್ನಡಕ್ಕೆ ತದ್ಭವ ಪದ. ಕಂಬಲ್ ಎಂದರೆ ಶಾಲು, ಉಣ್ಣೆಯಿಂದ ತಯಾರಾದ ಬಟ್ಟೆ, ಹೊದೆಯುವ ವಸ್ತ್ರ ಎಂಬ ಅರ್ಥ ಸಂಸ್ಕೃತ ನಿಘಂಟುವಿನಲ್ಲಿದೆ. ಅದರಲ್ಲಿಯೇ ಕಂಬಲಿಕಾ ಎಂದರೆ ಸಣ್ಣ ಕಂಬಳಿ. ಕಂಬಲಿನ್ ಎಂದರೆ ಕಂಬಳಿಯನ್ನು ಧರಿಸಿರುವವ ಎಂಬರ್ಥವಿದೆ.[೧] ಕನ್ನಡ ನಿಘಂಟುವಿನಲ್ಲಿ ಉಣ್ಣೆಯ ಉತ್ತರೀಯ,

ಸಂದರ್ಭದಲ್ಲಿ ನಿಂತ ಕಂಬಳಿಯ ಅಧ್ಯಯನಕಾರನಿಗೆ ಅದರ ಭೌತಿಕ ಸ್ವರೂಪದೊಂದಿಗೆ ಸಾಂಸ್ಕೃತಿಕ ಮಹತ್ವವೂ ಮುಖ್ಯವಾಗುತ್ತದೆ. ಹಾಗಾಗಿಯೇ ಇಂದು ಕಂಬಳಿಯನ್ನು ವ್ಯಾಖ್ಯಾನಿಸುವಾಗ ಜನಪದರ ಜೀವನದಲ್ಲಿ ಅವರ ಸಂಸ್ಕೃತಿಯ ಭಾಗವಾಗಿ ಕಂಬಳಿ ಪ್ರಾಮುಖ್ಯತೆ ಪಡೆದ ಬಗೆಯನ್ನೂ ಸೇರಿಸಬೇಕಿದೆ. ಈ ಮೇಲಿನ ಎಲ್ಲ ವ್ಯಾಖ್ಯೆಗಳನ್ನಿಟ್ಟುಕೊಂಡೇ ಕಂಬಳಿಯನ್ನು ಈ ರೀತಿಯಲ್ಲಿ ಮರು ವ್ಯಾಖ್ಯಾನಿಸ ಬಹುದಾಗಿದೆ: ಉಷ್ಣ ಅವಾಹಕವಾದ ಕುರಿಯ ಉಣ್ಣೆಯಿಂದ ತಯಾರಾಗಿ ಜನಪದರ ಜೀವನ ವಿಧಾನದಲ್ಲಿ ತನ್ನದೇ ಆದ ಸಾಂಸ್ಕೃತಿಕ ವಿಶಿಷ್ಟತೆಯನ್ನು ಪಡೆದ ವಸ್ತ್ರವೇ ಕಂಬಳಿ.

ಮಾನವನ ಸಾಂಸ್ಕೃತಿಕ ಬದುಕಿನಲ್ಲಿ ಕಂಬಳಿಯು ಪೂರ್ವದಿಂದಲೂ ಮಹತ್ವದ ಸ್ಥಾನವನ್ನು ಪಡೆದಿದೆ ಎನ್ನುವುದಕ್ಕೆ ಪ್ರಾಚೀನ ಕಾಲದಿಂದಲೂ ಅನೇಕ ಭಾಷೆಯ ಬೇರೆ ಬೇರೆ ಕೃತಿಗಳಲ್ಲಿ ಕಂಬಳಿ ಉಲ್ಲೇಖ ಗೊಂಡಿರುವುದೇ ಸಾಕ್ಷಿಯೊದಗಿಸುತ್ತದೆ. ಈ ಉಲ್ಲೇಖಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಪ್ರಧಾನವಾಗಿ ಮೂರು ಭಾಗಗಳಾಗಿ ವಿಂಗಡಿಸಿಕೊಂಡು ಮತ್ತೆ ಅವುಗಳಲ್ಲಿ ಉಪವಿಭಾಗಗಳನ್ನು ಈ ಕೆಳಗಿನಂತೆ ಮಾಡಿ ಕೊಳ್ಳಲಾಗಿದೆ.




ಈ ಮೂರೂ ವಿಭಾಗಗಳಲ್ಲಿ ಕಂಬಳಿಯ ಕುರಿತಾದ ಆಯಾ ಮನಃಸ್ಥಿತಿಯನ್ನು ಅರಿತುಕೊಳ್ಳುವುದ ರೊಂದಿಗೆ ಅದು ಜನಜೀವನದಲ್ಲಿ ಹಾಸುಹೊಕ್ಕಾದ ಬಗೆಯನ್ನು ಅರ್ಥೈಸಿಕೊಳ್ಳುವಲ್ಲಿಯೂ ಈ ಉಲ್ಲೇಖಗಳು ಸಹಕಾರಿಯಾಗುತ್ತವೆ.

## I. ಪೌರಾಣಿಕ

ಪುರಾಣ ಮೂಲತಃ ದೇವರಿಗೆ ಸಂಬಂಧಿಸಿದ್ದು. ದೇವತೆಗಳನ್ನು ಅಲೌಕಿಕವಾಗಿ ವೈಭವೀಕರಿಸುವುದೇ ಇವುಗಳ ಉದ್ದೇಶವಾದರೂ ಕೆಲವೊಮ್ಮೆ ಅವರ ಉದ್ದೇಶಕ್ಕೆ ಪೂರಕವಾಗಿ ಅವರಿಗೇ ತಿಳಿಯದಂತೆ ಜನಸಾಮಾನ್ಯ ವಿಷಯಗಳೂ ಇವುಗಳಲ್ಲಿ ಸೇರಿಕೊಂಡಿರುತ್ತವೆಯೆನ್ನುವುದನ್ನು ನಮ್ಮ ಪುರಾಣಗಳು ಸಾಬೀತುಪಡಿಸುತ್ತವೆ.

ಪುರಾಣಗಳಲ್ಲಿನ ಸಾಮಾನ್ಯ ವಿಷಯಗಳ ಉಲ್ಲೇಖಗಳು ಮುಖ್ಯವಾಗಲು ಕಾರಣ ಆ ವಸ್ತುವಿನ ಸುತ್ತ ಇರುವ ಒಂದು ಧರ್ಮದ ಮನೋಭಾವದ ಜೊತೆಗೆ ಅಲ್ಲಿನ ದೈವಕ್ಕೂ ಆ ವಸ್ತುವಿಗೂ ಇರುವ ಸಂಬಂಧವನ್ನು ಪ್ರಕಟಗೊಳಿಸುವುದು. ಹೀಗಾಗಿಯೇ ಪೌರಾಣಿಕ ಉಲ್ಲೇಖಗಳೂ ಕೂಡ ಅಧ್ಯಯನದಲ್ಲಿ ಮಹತ್ವದ ಸ್ಥಾನ ಪಡೆಯುತ್ತವೆ. ಅಂಥ ಪೌರಾಣಿಕವಾದ ಕೆಲವೊಂದು ಮಹತ್ವದ ಅಂಶಗಳನ್ನು ಈ ಮುಂದೆ ಗಮನಿಸಬಹುದು.

ಶ್ರೀ ರಾಮಚಂದ್ರ ಢೇರೆಯವರು ಸ್ಕಾಂದ ಪಾಂಡುರಂಗ ಮಹಾತ್ಮೆ ಮತ್ತು ಭವಿಷ್ಯೋತ್ತರ ಪುರಾಣಾಂತರ್ಗತ ವೆಂಕಟಾಚಲ ಮಹಾತ್ಮೆ ಎಂಬ ಪುರಾಣ ಗ್ರಂಥಗಳಲ್ಲಿ ಬರುವ ಕಂಬಳಿಯ ಮಹತ್ವವನ್ನು ಈ ಮುಂದಿನಂತೆ ಪ್ರಸ್ತಾಪಿಸುತ್ತಾರೆ.

ಸ್ಕಾಂದ ಪಾಂಡುರಂಗ ಮಹಾತ್ಮೆ ಪಂಢರಪುರದ ಸ್ಥಳ ಪುರಾಣ. ಪಂಢರಪುರ ಕ್ಷೇತ್ರದಲ್ಲಿ ಪುಣ್ಯಪ್ರಾಪ್ತಿ ಕಾರ್ಯಗಳನ್ನು ಹೇಳುವಾಗ 'ಕಂಬಲಾನಿ ಚ ಯಸ್ತತ್ರ ವರ್ಷಾಕಾಲೇ.... ಲಭತೇ ನರಃ||' (ಸ್ಕಂದ ಪಾಂಡುರಂಗ ಮಹಾತ್ಮೆ ೨.೧೫) ಎಂಬ ಶ್ಲೋಕ ಬರುತ್ತದೆ. ಯಾವ ವ್ಯಕ್ತಿಯು ಪಂಡರಪುರ ಕ್ಷೇತ್ರದಲ್ಲಿ ಮಳೆಗಾಲದಲ್ಲಿ ಕಂಬಳಿಯನ್ನು ದಾನ ಮಾಡುತ್ತಾನೋ ಅವನಿಗೆ ಆಯುರಾರೋಗ್ಯ ಮತ್ತು ಕೀರ್ತಿ ಪ್ರಾಪ್ತವಾಗುತ್ತದೆ ಎನ್ನುತ್ತಾನೆ ಮಹಾತ್ಮೆಕಾರ. ವಿಠ್ಠಲನಿಗೆ ಕಂಬಳಿ ಪ್ರಿಯವಾದ ವಸ್ತ್ರ ಎಂಬ ನಂಬಿಕೆಯಿಂದಾಗಿ ಭಕ್ತರು ಭಕ್ತಿಯಿಂದ ಹೆಣೆದು ಅರ್ಪಿಸಿದ ಜೀರ್ಣ ಸ್ಥಿತಿಯಲ್ಲಿರುವ ಮುತ್ತಿನ ಕಂಬಳಿಯನ್ನು ಇವತ್ತಿಗೂ ಅವನ ವಸ್ತ್ರಾಭರಣದಲ್ಲಿ ಪಂಢರಪುರದಲ್ಲಿ ಕಾಣುತ್ತೇವೆ. ತೀರ ಇತ್ತೀಚಿಗೆ ಪಂಡರಪುರದ ಕುರುಬರು ಸೂರತ್‌ನಲ್ಲಿ ಭವ್ಯವಾದ ಕಂಬಳಿಯೊಂದನ್ನು ದೇವರಿಗೆ ನೇಯಿಸಿ ತಂದು ಅರ್ಪಿಸಿದ್ದಾರೆ ಎಂಬ ಮಾಹಿತಿ ದೊರೆಯುತ್ತದೆ.

ಕಂಬಳಿ ಪಂಢರಪುರದ ವಿಠ್ಠಲನಂತೆ ತಿರುಪತಿಯ ವೆಂಕಟೇಶನಿಗೂ ಪ್ರಿಯವಾದುದಾಗಿರಬೇಕು ಎಂದು ಯೋಚಿಸಲು ಅನುವು ಮಾಡಿಕೊಡುವುದು 'ಭವಿಷ್ಯೋತ್ತರ ಪುರಾಣಾಂತರ್ಗತ ವೆಂಕಟಾಚಲ ಮಹಾತ್ಮೆ' ಎಂಬ ಸ್ಥಳ ಪುರಾಣ. ಇದರಲ್ಲಿ ಶ್ರೀನಿವಾಸನ ವಿವಾಹ ಕಾಲಕ್ಕೆ ಅವನ ಮಾವನಾದ ಆಕಾಶರಾಜನು ನೀಡಿದ ಉಡುಗೊರೆಯಲ್ಲಿ ಕಂಬಳಿಯನ್ನು ಉಲ್ಲೇಖಿಸುತ್ತಾನೆ. 'ಲಘುಪಾತ್ರ ಸಮೋಪೇತಂ.... ದತ್ತವಾನ್ ರಾಜಸತ್ತಮಮ್||' (ಭವಿಷ್ಯೋತ್ತರ ಪುರಾಣಾಂತರ್ಗತ ವೆಂಕಟಾಚಲ ಮಹಾತ್ಮೆ ೧೧, ೩೫೦) ಎಂಬುದರಿಂದ ಚಿಕ್ಕ ದೊಡ್ಡ ಪಾತ್ರೆಗಳೂ ಅಲ್ಲದೇ ೬೪ ಕಂಬಳಿಯನ್ನು ಶ್ರೀನಿವಾಸನಿಗೆ ಆ ಶ್ರೇಷ್ಠರಾಜನು ನೀಡಿದನು ಎಂಬ ವಿವರಣೆ ದೊರೆಯುತ್ತದೆ.

ಹೀಗೆ ವಿಠ್ಠಲ-ವೆಂಕಟೇಶ ಇಬ್ಬರೂ ಒಂದೇ ದೇವರಾಗಿದ್ದಾರೆ. ಎಂದು ಸಾಧಿಸುವಾಗ ಬಳಸಿಕೊಂಡ ಕೆಲವು ಸಾಮ್ಯತೆಗಳಲ್ಲಿ ವಿಠ್ಠಲ ಮತ್ತು ವೆಂಕಟೇಶ ಇವರಿಬ್ಬರಿಗೂ ಕಂಬಳಿ ಅತ್ಯಂತ ಪ್ರಿಯವಾದ ಬಟ್ಟೆ ಎಂಬುದನ್ನು ಢೇರೆಯವರು ಪ್ರತಿಪಾದಿಸುತ್ತಾರೆ.[೯]

ಹಾಲ್ಮತೋತ್ತೇಜಕ ಪುರಾಣ ಹಾಗೂ ಹಾಲುಮತ ಪುರಾಣಗಳಲ್ಲಿ ಪ್ರಸ್ತಾಪಿಸಿದಂತೆ ಇತಿಹಾಸ ಮಂಜರಿಯಲ್ಲಿಯೂ ಕುರಿರೋಮ ವಸ್ತ್ರಗಳ ಉಲ್ಲೇಖ ಕಂಡು ಬರುತ್ತದೆ. ಇತಿಹಾಸ ಮಂಜರಿಯ ೨೪ನೆಯ ಅಧ್ಯಾಯ ಮೂರನೇ ಗ್ರಂಥದಲ್ಲಿ ಕುರಿ ರೋಮ ವಸ್ತ್ರ ಕುರಿತಾದ ಶ್ಲೋಕ ಈ ಮುಂದಿನಂತಿದೆ.

ಪಾರ್ವತೀ ಮುದಿತಾತತ್ರ-ಶಂಕರಂ ಲೋಕ ಶಂಕರರ
ಪಪ್ರಚ್ಛಗೌರೀ ಸಂತುಷ್ಟ-ಲೋಕಾನಾಂಹಿತಕಾಮ್ಯಯಾ
ಶಂಭೋ ಸರ್ವಜ್ಞ ದೇವೇಶ-ಕೌರಬಃ ಪ್ರಾಪ್ಯಸತ್ವರಂ
ಸಂತತಿಂ ಕಾರಯಾಮಾಸ-ಕೌರರ್ಬಾಲೋಕ ಸಮ್ಮತಾ
ತೇವೈಧರ್ಮಾದಿಯುಕ್ತಾಶ್ಚ-ಭವಿಷ್ಯಂತಿ ಕಲೌಯುಗೇ

ಈ ಶ್ಲೋಕವನ್ನು ಪ್ರಮಾಣವಾಗಿಟ್ಟುಕೊಂಡು ಹಾಲ್ಮತೋತ್ತೇಜಕ ಪುರಾಣ ಮತ್ತು ಹಾಲುಮತ ಪುರಾಣಗಳಲ್ಲಿ ತಮತಮಗೆ ಸಾಧ್ಯವಾದ ಛಂದಸ್ಸಿನಲ್ಲಿ ಈ ವಿಷಯವನ್ನು ಪ್ರಸ್ತಾಪಿಸುತ್ತಾರೆ. ತಪಸ್ಸಿನ ಪ್ರಭಾವದಿಂದಲೂ ಗೌರವದಿಂದಲೂ ಮೆರೆಯುತ್ತಿರುವ ಕೌರಬ ಮಹರ್ಷಿಯು ಚಾಣಾಕ್ಷತೆಯಿಂದ ಈ ಭೂಮಂಡಲದಲ್ಲಿ ಕುರುಬರನ್ನು ಸೃಷ್ಟಿಸಿ ರೋಮ ವಸ್ತ್ರಗಳನ್ನು ಅವರಿಂದ ತಯಾರಿಸಿ ಧರೆಯಲ್ಲಿರುವ ತಪಸ್ವಿಗಳಿಗೆ ಅವುಗಳನ್ನು ಕೊಡಿಸಿ ಅತ್ಯಧಿಕವಾದ ಚಳಿಯನ್ನು ನಿರಂತರ ತಡೆದು ಸುಖಸಾಗರದಲ್ಲಿರಲು ದಯಪಾಲಿಸು ಎಂದು ಪಾರ್ವತಿಯು ಪರಮೇಶ್ವರನಿಗೆ ಹೇಳಿದ ವಿಷಯ ಈ ಶ್ಲೋಕದಲ್ಲಿದೆ. ಇತಿಹಾಸ ಮಂಜರಿ ಕೃತಿಯಲ್ಲಿಯ ಈ ಶ್ಲೋಕ ರೋಮವಸ್ತ್ರವು ಅತ್ಯಂತ ಘೋರವಾದ ಚಳಿಯಲ್ಲಿಯೂ ಉಷ್ಣವಾಹಕವಾಗಿದೆಯೆಂದು ಹೇಳಿದ್ದನ್ನು ನೋಡಿದರೆ ಕಂಬಳಿಯು ಈ ವೈಜ್ಞಾನಿಕ ಮಹತ್ವದಿಂದಾಗಿಯೇ ಜನಸಾಮಾನ್ಯರ ಜೀವನದಲ್ಲಿ ಪ್ರಾಮುಖ್ಯತೆ ಪಡೆದಿರುವುದು ಸ್ಪಷ್ಟವಾಗುತ್ತದೆ.

ಇನ್ನೊಂದೆಡೆಯಲ್ಲಿ ಸ್ಕಾಂದೇನೈಮಿಷಸಂಹಿತಾಯಾಂ ಸಪ್ತಮಾಧ್ಯಾಯದಲ್ಲಿ

ಕುರರೀ ಚ ಪು ಸಂಗ್ರಾಹಿ-ದಾಸೆಯೋಕೌರಭೋ ಮಹಾನ್
ರುಕ್ಷಿಣಾಂಪ್ರಿಯಕಾಮೇಣ-ಯಯೌವಿಂಧ್ಯಾದಿ ಮಾದರಾತ್
ತತ್ರಹತ್ವಾತುಹರಿಣಾನ್-ಕುರರೀಶ್ಚಯಥಾಕ್ರಮಂ
ಭಾರದ್ವಾಜೋದ್ವರಾರ್ಥಂವೈ-ಪೋಕ್ಷಿತಂ ಹರಿಣಂ ತಥಾ
ಹಿಂಸಯಾಮಾಸನಕ್ರೊಧಾತ್-ಶಶಾಪಸುಮಹತ್ತರಂ
ಅಸ್ಮನ್‌ಮೃಗಜಿಘೀರ್ಷತ್ವಂ-ಪಾವನಾನ್ ಹರಿಣಾನ್‌ಹರನ್
ಇತಃ ಪೂರ್ವಂ ಅಜಾಹಿಂಸನ್-ರೋಮಣೇಢ್ಥಮಕಾರಯಾ ||೨೨||

ಎಂಬ ಶ್ಲೋಕವಿದೆ.[೧೦]

ಸಿದ್ಧಬೀರೇಶನು ರೇವಣಸಿದ್ಧನಿಗೆ ಹಾಲುಮತದವರು ಕುರಿಗಳನ್ನು ಅನುದಿನವೂ ಇಷ್ಟೊಂದು ಪ್ರೀತಿಯಿಂದ ಸಲಹುತ್ತ ಬರಲು ಕಾರಣವೇನು ಎನ್ನಲು ಅದಕ್ಕೆ ರೇವಣಸಿದ್ಧನು ಕಾರಣವನ್ನು ಹೀಗೆ ಹೇಳುತ್ತಾನೆ. ಹಾಲುಮತದ ದಾಸಯ್ಯನೆಂಬವನು ವಿಂಧ್ಯಾದ್ರಿ ಕಾನನದಲ್ಲಿ ಸಂಚರಿಸುತ್ತ ರೋಮವಸ್ತ್ರಗಳನ್ನು ನಿರ್ಮಿಸಲು

ಜಿಂಕೆಗಳನ್ನು ಹಿಡಿದು ತಂದ. ಅವು ಭಾರದ್ವಾಜ ಋಷಿಯ ಆಶ್ರಮದಲ್ಲಿ ಯಜ್ಞಕ್ಕಾಗಿ ಪರಿಪಾಲಿಸಿದ ಜಿಂಕೆಗಳಾದ ಕಾರಣ ಅವು ಭರದಿಂದ ಮೃತ ಹೊಂದಿದವು. ಹಾಗಾಗಿ ಮುನಿವರನು ಅತಿಕೋಪದಲ್ಲಿ ಮರುಳ ಕೌರಬಿಯೇ ನೀನು ಇಂದಿನಿಂದ ಜಿಂಕೆಗಳ ದರುಶನಕ್ಕೆ ಹೋಗದೇ ನಿರಂತರವಾಗಿ ನಾರದ ಮುನಿವರ್ಯನ ಶಾಪದಿಂದ ಉದ್ಭವಿಸಿದ ಮೇಕೆ, ಕುರಿಗಳ ಕೂದಲುಗಳನ್ನು ಕತ್ತರಿಸಿ ಉಣ್ಣೆ ವಸ್ತ್ರಗಳನ್ನು ತಯಾರಿಸಿ ಜನರಿಗೆ ಕೊಡುತ್ತಾ ಇರು. ಅದನ್ನೇ ಕುಲಕಸುಬನ್ನಾಗಿ ಮಾಡುತ್ತಲೇ ಸಾಗು. ಆದರೆ ಪಂಚಾಕ್ಷರೀ ಮಂತ್ರ, ವಿಭೂತಿ ಮತ್ತು ರುದ್ರಾಕ್ಷಿಗಳು ಮಾತ್ರ ನಿನಗೆ ದೂರಾಗಲಿ ಎಂದು ಶಾಪವನಿತ್ತನು ಎಂಬ ವಿಷಯವನ್ನು ಹಾಲ್ಮತೋತ್ತೇಜಕ ಪುರಾಣ ಮತ್ತು ಹಾಲುಮತದ ಪುರಾಣವು ಎಂಬ ಎರಡೂ ಪುರಾಣಗಳು ಪ್ರಸ್ತಾಪಿಸುತ್ತವೆ.

ಪುರಾಣ ಕೃತಿಗಳಲ್ಲಿಯೂ ಲೌಕಿಕದಲ್ಲಿನ ಸಾಮಾಜಿಕ ಸಂದರ್ಭಗಳು ಎಡೆಪಡೆಯುತ್ತವೆ ಎನ್ನುವುದಕ್ಕೆ ಮೇಲಿನ ವಿಷಯ ಉತ್ತಮ ಉದಾಹರಣೆಯಾಗುತ್ತದೆ. ಜಾತಿ ವೈಷಮ್ಯಗಳಿಗೆ ಐತಿಹಾಸಿಕ ಕಾರಣಗಳೇನೇ ಇರಲಿ ಪುರಾಣಗಳೂ ಕೂಡ ಈ ವೈಷಮ್ಯಗಳನ್ನು ಹುಟ್ಟು ಹಾಕುವಲ್ಲಿ ಮತ್ತು ಮುಂದುವರಿಸಿಕೊಂಡೇ ಬೆಳೆಯುವಲ್ಲಿ ಮಹತ್ವದ ಪಾತ್ರವಾಡುತ್ತವೆ. ಶಾಪದ ಹೆಸರಿನಲ್ಲಿ ಕುರುಬರಿಗೆ ವಿಭೂತಿ, ರುದ್ರಾಕ್ಷಿಯಂತಹ ಭಾವನಾತ್ಮಕ ವಸ್ತುಗಳನ್ನು ನಿಷೇಧಿಸುವುದರ ಮೂಲಕ ಸ್ವಾತಂತ್ರ್ಯಹರಣ ಮಾಡಿ ಅವರನ್ನು ಒಂದು ವೃತ್ತಿಗೆ ಮಾತ್ರ ಸೀಮಿತಗೊಳಿಸಿರುವುದು ಆ ಕಾಲದ ವೃತ್ತಿ ಏಣಿ-ಶ್ರೇಣಿಯಲ್ಲಿ ವಿಭೂತಿ, ರುದ್ರಾಕ್ಷಿಯಂತಹವುಗಳು ಶ್ರೇಷ್ಠ, ಕಂಬಳಿ ಉದ್ಯೋಗ ಕನಿಷ್ಟ. ಅಲ್ಲದೇ ಕುರುಬರಿಗೆ ಕಂಬಳಿಯ ಉದ್ಯೋಗ ಮಾತ್ರ ಸರಿಯಾದುದು ಎಂಬ ಮನೋಭಾವ ಇಲ್ಲಿ ಕಂಡು ಬರುತ್ತದೆ. ಕಂಬಳಿ ನೇಯ್ಗೆ ವೃತ್ತಿಯು ವೃತ್ತಿ ಮೂಲದಿಂದ ಬಂದುದಲ್ಲ, ಅದು ಶಾಪ ಮೂಲದಿಂದ ಬಂದುದೆಂಬ ಅಭಿಪ್ರಾಯವನ್ನು ಹೇರುವುದರ ಮೂಲಕ ಒಂದು ವರ್ಗಕ್ಕೆ ಕೀಳರಿಮೆಯನ್ನು ಹುಟ್ಟಿಸುವ ಕೆಲಸವನ್ನೂ ಈ ಪುರಾಣಗಳು ಕೆಲವೊಮ್ಮೆ ಮಾಡುತ್ತವೆ. ಹೀಗೆ ಪುರಾಣಗಳು ಕೆಲವೊಮ್ಮೆ ಅರ್ಧಸತ್ಯವನ್ನು ಮಾತ್ರ ಹೊತ್ತು ತರುವಲ್ಲಿ ಸಫಲವಾಗುತ್ತವೆ ಎನ್ನಬಹುದು. ಕುರುಬರಿಗೆ ಕುರಿ ಸಾಕಾಣಿಕೆಯ ಮೂಲಕ ಕಂಬಳಿ ನೇಯುವುದು ಒಂದು ವೃತ್ತಿಯಾಗಿದ್ದು ಮಾತ್ರ ಸತ್ಯ.

ಇವಿಷ್ಟು ಲಭ್ಯ ಪೌರಾಣಿಕ ಅಂಶಗಳು. ಇಲ್ಲೆಲ್ಲ ಕಂಬಳಿ ಲೌಕಿಕ ಬದುಕಿನಲ್ಲಷ್ಟೇ ಅಲ್ಲ ಅಲೌಕಿಕ ಜೀವನದಲ್ಲೂ ಪ್ರಾಮುಖ್ಯತೆ ಪಡೆದಿರುವುದನ್ನು ಗಮನಿಸುತ್ತೇವೆ.

## II. ಐತಿಹಾಸಿಕ

ಚರಿತ್ರೆ ಗತಕಾಲದ ಸಂಸ್ಕೃತಿಯನ್ನು ಸಾಕ್ಷೀ ಸಮೇತವಾಗಿ ಕಟ್ಟಿಕೊಡುತ್ತದೆ. ಸತ್ಯವನ್ನು ಕಾಲದ ಸಮೇತವಾಗಿ ಹಿಡಿದಿಡುವ ಕಾರ್ಯವೂ ಇಲ್ಲಿ ನಡೆಯುತ್ತದೆ. ಶಾಸನ, ಶಿಲ್ಪಕಲೆ, ಕೃತಿಗಳು ಮುಂತಾದವು ಕಂಬಳಿಯ ಚರಿತ್ರೆಯನ್ನು ಅರಿತುಕೊಳ್ಳುವಲ್ಲಿ ಪೂರಕ ಆಕರಗಳಾಗಿ ನಿಲ್ಲುತ್ತವೆ.

೧. ಶಾಸನ

ಇತಿಹಾಸ ನಿರ್ಮಿಸಿಕೊಳ್ಳುವಲ್ಲಿ ಶಾಸನಾಧಾರಗಳು ಮೊದಲ ಸ್ಥಾನವನ್ನು ಪಡೆಯುತ್ತವೆ. ಕುರುಬರಿಗೆ ಸಂಬಂಧಿಸಿದ ಹಲವು ವಿಷಯಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಅಂತೆಯೇ ಕಂಬಳಿ ವರ್ತಕರ ವಿಷಯಕವಾಗಿಯೂ ಶಾಸನ ದೊರೆಯುತ್ತದೆ. ೧೧೬೧ರಲ್ಲಿ ದೊರೆಯುವ ಶಾಸನವೊಂದರಲ್ಲಿ 'ನೂಲಪರ್ವಕೆ ವರ್ಷಂಪ್ರತಿ ಕುರುಬ ಸೇಣಿಗರೊಕ್ಕಲು, ವೀಸವಯ್ಬಂ ಕೊಟ್ಟರ್' ಎನ್ನುವಲ್ಲಿ ಕುರುಬಸೇಣಿಯ ಉಲ್ಲೇಖ ದೊರೆಯುತ್ತದೆ.[೧೧] ಕುರುಬಸೇಣಿ ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಸಹಕಾರಿ ಸಂಘ. ಕುರುಬ ಸೇಣಿಯಿಂದಲೇ ಪ್ರತಿವರ್ಷವೂ ನೂಲಹಬ್ಬಕ್ಕೆ ಉಣ್ಣೆಯ ನೂಲನ್ನು ಕೊಡುತ್ತಿದ್ದರು ಎಂಬುದು ಈ ಶಾಸನದಿಂದ ತಿಳಿದು ಬರುತ್ತದೆ.

'ಕುರುಬಸೇಣಿ' ಎಂಬುದು ಕುರುಬರ ಕಸುಬಿಗೆ ಸಂಬಂಧಿಸಿದುದು. ತಾವು ಉತ್ಪಾದಿಸುತ್ತಿದ್ದ ಉತ್ಪಾದನೆಗಳ ಮಾರಾಟಕ್ಕಾಗಿ ಸಮಾನ ವೃತ್ತಿಯವರು ಕೂಡಿಕೊಂಡು ರಚಿಸಿಕೊಂಡ ಸಹಕಾರಿ ಸಂಘ. ಕುರಿಯ ಉಣ್ಣೆಯಿಂದ ಕಂಬಳಿ ತಯಾರಿಸಿ ಈ ಕುರುಬ ಸೇಣಿಯ ಮೂಲಕವೇ ಮಾರಾಟ ನಡೆಯುತ್ತಿತ್ತೆನ್ನಿಸುತ್ತದೆ. ಹೀಗೆ ಕುರುಬ ಸೇಣಿಯ ಮುಖೇನ ಪ್ರಾಚೀನ ಕಾಲದಿಂದಲೂ ಕಂಬಳಿಯ ಉತ್ಪಾದನೆ ಮತ್ತು ಮಾರಾಟವು ಸಾಂಘಿಕವಾಗಿ ವ್ಯವಸ್ಥಿತ ರೂಪದಲ್ಲಿ ನಡೆಯುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ.

೨. ಶಿಲ್ಪಕಲೆ

ಶಿಲ್ಪಕಲಾಕೃತಿಗಳು ಪರಂಪರೆಯೊಂದರ ಸಾಂಸ್ಕೃತಿಕ ಪ್ರತಿನಿಧಿಗಳಾಗಿ ನಿಲ್ಲುತ್ತವೆ. ಸಾಮಾನ್ಯ ಸಾಮಾಜಿಕ ವಿಷಯ, ವಸ್ತುಗಳೂ ಇಲ್ಲಿ ಎಡೆಪಡೆದಿರುತ್ತವೆ ಎನ್ನುವುದಕ್ಕೆ ಶಿಲ್ಪಕಲೆಯಲ್ಲಿಯೂ ಕಂಬಳಿ ಕಂಡು ಬರುವುದೇ ಸಾಕ್ಷಿ. ಇಂಥ ಸಾಕ್ಷಿಯನ್ನು ಲೇಪಾಕ್ಷಿ ಮತ್ತು ಹಂಪಿಯ ಕೆಲವು ದೇವಾಲಯಗಳಲ್ಲಿಯ ಶಿಲ್ಪಕಲೆಗಳೇ ಒದಗಿಸುತ್ತವೆ.

ಲೇಪಾಕ್ಷಿ ಆಂಧ್ರಪ್ರದೇಶದ ದಕ್ಷಿಣದಲ್ಲಿರುವ ಅನಂತಪುರ ಜಿಲ್ಲೆಯ ಹಿಂದುಪುರ ತಾಲೂಕಿನ ಸಾಮಾನ್ಯ ಹಳ್ಳಿ. ಕಳೆದ ೪೦೦-೪೫೦ ವರ್ಷಗಳಿಂದ ಲೇಪಾಕ್ಷಿ ಪ್ರಸಿದ್ಧ ಕ್ಷೇತ್ರವಾಗಿರುವುದು ಅಲ್ಲಿಯ ವೀರಭದ್ರದೇವ ಸ್ಥಾನದಿಂದಾಗಿ. ಇದೇ ವೀರಭದ್ರ ದೇವಸ್ಥಾನದ ಎರಡು ಕಂಬಗಳ ಮೇಲೆ ಗೋವಳಿಗರ ಕುರಿತಾದ ಶಿಲ್ಪವಿದ್ದ (Lepakshi: by A man charla Gopal Rao plate No.xxviii. A shephord on a pillar in the Ranga Mantapa) ಬಗ್ಗೆ ಉಲ್ಲೇಖ ದೊರೆಯುತ್ತದೆ ಎಂದು ಥೇರೆ ಹೇಳುತ್ತಾರೆ.[೧೨] ಈ ಶಿಲ್ಪದಲ್ಲಿ ಕುರುಬ ಅಥವಾ ಗೌಳಿಯೊಬ್ಬ ಕಂಬಳಿ ಹೊದ್ದು ನೆಲಕ್ಕೆ ಊರಿದ ಕೋಲಿಗೆ ತನ್ನ ಗದ್ದ ಊರಿ ಎರಡೂ ಹಸ್ತಗಳಿಂದ ಆ ಕೋಲು ಹಿಡಿದು ನಿಂತದ್ದನ್ನು ಕೆತ್ತಲಾಗಿದೆ.

ಇದನ್ನು ನೋಡಿದಾಗ ಕಂಬಳಿಯು ಪಶುಪಾಲಕ ಜೀವನದ ಅವಿಭಾಜ್ಯ ಅಂಗವಾದದ್ದು ಕಂಡುಬರುತ್ತದೆ. ಅಲ್ಲದೇ ಕಂಬಳಿಯು ಯಾವುದೇ ಪ್ರಾದೇಶಿಕ ಭೇದವಿಲ್ಲದೇ ಎಲ್ಲ ಕಡೆಗೂ ಜನಸಾಮಾನ್ಯ ಬದುಕಿನೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿರುವುದನ್ನು ಕಾಣುತ್ತೇವೆ. ಮೊದಲೇ ಹೇಳಿದಂತೆ ಕಂಬಳಿಯ ಕುರಿತಾದ ಶಿಲ್ಪಕಲೆ ದೊರೆಯುವ ಇನ್ನೊಂದು ಕ್ಷೇತ್ರವೆಂದರೆ ಹಂಪಿ. ಇಲ್ಲಿನ ಶೈವ ದೇವಾಲಯ ಹಾಗೂ ಮಲಪನ ಗುಡಿಯ ದೇವಾಲಯಗಳಲ್ಲಿ ಇಂಥ ಶಿಲ್ಪಗಳನ್ನು ನೋಡಬಹುದು. ಮಲಪನ ಗುಡಿಯು ಹೊಸಪೇಟೆಯಿಂದ ಹಂಪೆಗೆ ಹೋಗುವ ಮಾರ್ಗ ಮಧ್ಯದಲ್ಲಿನ ಒಂದು ಚಿಕ್ಕಹಳ್ಳಿ. ಇಲ್ಲಿಯ ಪ್ರಾಚೀನವಾದ ವಿಠ್ಠಲ ದೇವಾಲಯದಲ್ಲಿ ಲೇಪಾಕ್ಷಿಯಂತಹದೇ ಕಲ್ಪನಾಬಂಧವುಳ್ಳ ಆದರೆ ಉಬ್ಬುಶಿಲ್ಪದಲ್ಲಿರುವ ಕುರುಬರ ಶಿಲ್ಪಗಳು ದೇವಾಲಯದ ಕಂಬದ ಮೇಲೆ ಅತ್ಯಂತ ಆಕರ್ಷಕವಾಗಿ ಕೆತ್ತಲ್ಪಟ್ಟಿದ್ದನ್ನು ಕಾಣುತ್ತೇವೆ. 'ತಲೆಯ ಮೇಲೆ ಕಂಬಳಿ ಹೊದ್ದು ಮತ್ತು ಕೋಲಿನ ಮೇಲೆ ಕೈಗದ್ದು ಊರಿದ ಸ್ಥಿತಿಯಲ್ಲಿ ನಿಂತುಕೊಂಡ ಕುರುಬನು ಈ ಶಿಲ್ಪಭಂಡಾರದಲ್ಲಿ ಬರುವನು' ಎನ್ನುತ್ತಾರೆ.[೧೩]

ಇದನ್ನು ನೋಡಿದಾಗ ದನಗಾಹಿ/ಪಶುಪಾಲಕ/ಕುರುಬನ ಬದುಕನ್ನು ಕಂಬಳಿಯಿಂದ ಪ್ರತ್ಯೇಕಿಸಿ ನೋಡಲಾಗುವುದಿಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ. ಹಾಗೆಯೇ ಕಂಬಳಿಯ ಸಂಸ್ಕೃತಿಯನ್ನು ಕಟ್ಟಿಕೊಳ್ಳುವಾಗ ಕುರುಬರು ಅಥವಾ ಪಶುಪಾಲಕರನ್ನು ಹೊರಗಿಟ್ಟು ಕಂಬಳಿಯನ್ನು ನೋಡಲೂ ಸಾಧ್ಯವಾಗದು ಎಂಬ ಅಂಶ ಮನವರಿಕೆಯಾಗುತ್ತದೆ.

## ೩. ಕೃತಿಗಳು

ಆಯಾಕಾಲದ ಸಾಮಾಜಿಕ ಬದುಕಿನ ವಿಷಯ, ವಸ್ತುವಿನ ಚರಿತ್ರೆಯನ್ನು ಕಟ್ಟಿಕೊಳ್ಳುವಾಗ ಆಯಾಕಾಲದ ಕೃತಿಗಳಲ್ಲಿನ ಉಲ್ಲೇಖಗಳೂ ಕೂಡ ಪೂರಕ ಮಾಹಿತಿ ಒದಗಿಸಿಕೊಡುತ್ತವೆ.

**ಪ್ರಾಚೀನ ಕೃತಿಗಳು (ಕ್ರಿ.ಪೂ - ಕ್ರಿ.ಶ. ೧೯ನೇ ಶತಮಾನ)**

ಈ ವಿಭಾಗದಲ್ಲಿ ಕಂಬಳಿಯ ಕುರಿತಾದ ಒಂದೇ ಒಂದು ವಾಕ್ಯ ಬಂದರೂ ಅವುಗಳನ್ನೂ ಉಲ್ಲೇಖಿಸಲಾಗಿದೆ. ಕಾರಣ ಪ್ರಾಚೀನ ಕೃತಿಗಳಲ್ಲಿನ ಅಷ್ಟಷ್ಟೇ ಉಲ್ಲೇಖಗಳು ಕಂಬಳಿಯ ಇತಿಹಾಸವನ್ನು ನಿರೂಪಿಸುವಲ್ಲಿ ಸಹಕಾರಿಯಾಗಬಲ್ಲವು.

ಮನುಸ್ಮೃತಿ ಹಿಂದೂ ಧರ್ಮಶಾಸ್ತ್ರಕ್ಕೆ ಬುನಾದಿಯಾದ ಗ್ರಂಥ. ಇದರ ರಚನೆಯ ಕಾಲವನ್ನು ಬುಲ್ಹರ ಮತ್ತು ಕಾಣೆ ಎಂಬ ವಿದ್ವಾಂಸರು ಕ್ರಿ.ಪೂ.೨೦೦ರಿಂದ ಕ್ರಿ.ಶ.೨೦೦ರ ಒಳಗಾಗಿ ಇದೆ ಎಂದು ಅಭಿಪ್ರಾಯಪಡುತ್ತಾರೆ. ಇದರಲ್ಲಿ ಕಂಬಳಿಯ ಪ್ರಸ್ತಾಪವಿಲ್ಲವಾದರೂ ಉಣ್ಣೆಯ ನೂಲಿನ ಉಲ್ಲೇಖವಿದೆ.

ಕಾರ್ಪಾಸಮುಪವೀತಂ ಸ್ಯಾದ್ವಿಪ್ರಸ್ಯೋರ್ಧ್ವವೃತಂ ತ್ರಿವೃತ್।
ಶಣಸೂತ್ರಮಯಂ ರಾಜ್ಞೋ ವೈಶ್ಯಸ್ಯಾ ವಿಕಸೌತ್ರಿಕಂ[೧೪]

ಹತ್ತಿ, ಸಣಬು, ಕುರಿರೋಮಗಳಿಂದ ಮಾಡಿದ ನೂಲಿನ ಮೂರೆಳೆಯ ಉಪವೀತವನ್ನು ಅನುಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಧರಿಸಬೇಕು ಎನ್ನುತ್ತಾನೆ ಮನುಸ್ಮೃತಿಕಾರ. ಅಂದಾಗ ಉಣ್ಣೆ ನೂಲುವಿಕೆ ಮನುಸ್ಮೃತಿ ಕಾಲಕ್ಕಾಗಲೇ ರೂಢಿಯಲ್ಲಿತ್ತೆಂಬ ಅಂಶ ಸ್ಪಷ್ಟವಾಗುತ್ತದೆ. ಅಲ್ಲದೇ ಉಣ್ಣೆಯು ಇಂದಿಗಷ್ಟೇ ಅಲ್ಲ ಮನುಸ್ಮೃತಿ ಕಾಲದಿಂದಲೂ ಪೂಜ್ಯನೀಯ ಭಾವವನ್ನು ಉಳಿಸಿಕೊಂಡು ಬಂದಿದೆ ಎಂದು ತಿಳಿಯ ಬಹುದು. ಮನುಸ್ಮೃತಿಯಲ್ಲಿಯೇ ಇನ್ನೊಂದು ಕಡೆಗೆ

'....ವನೇರನ್ನಾನು ಪೂರ್ವ್ಯೇಣ ಶಾಣಕ್ಷಾಮಾವಿಕಾನಿ ಚ' ಎನ್ನುತ್ತಾನೆ.[೧೫]

ಶಣ-ಕ್ಷುಮಾ-ಅವಿ(ಕುರಿ)ಗಳ ನೂಲಿನ ಬಟ್ಟೆಯನ್ನು ಅಧರೀಯವಾಗಿಯೂ ಹೊದಿಕೆ ಉಡಿಗೆ ಮಾಡಬಹುದು ಎಂಬ ಉಲ್ಲೇಖ ದೊರೆಯುವುದನ್ನು ನೋಡಿದರೆ ಮನುಸ್ಮೃತಿ ಕಾಲಕ್ಕಾಗಲೇ ಉಣ್ಣೆಯ ನೂಲಿನಿಂದ ವಸ್ತ್ರವನ್ನು ನೇಯುವ ರೂಢಿ ಬೆಳೆದು ಬಂದಿತ್ತೆಂದು ತಿಳಿಯುತ್ತದೆ. ಈ ಉಲ್ಲೇಖ ಕಂಬಳಿಯ ಬಳಕೆಯ ಪ್ರಾಚೀನತೆಯನ್ನು ಮನುಸ್ಮೃತಿಗೂ ಹಿಂದೆ ಸರಿಸುತ್ತದೆ.

ಕಂಬಳಿಯ ಕುರಿತಾದ ಉಲ್ಲೇಖ ದೊರೆಯುವ ಇನ್ನೊಂದು ಪ್ರಾಚೀನ ಕೃತಿಯೆಂದರೆ ಕೌಟಿಲ್ಯನ ಅರ್ಥಶಾಸ್ತ್ರ. ಇದರ ಕಾಲ ಕ್ರಿ.ಪೂ.೪ನೇ ಶತಮಾನ. ಹೆಸರಲ್ಲಿ ಇದು ಅರ್ಥಶಾಸ್ತ್ರವಾದರೂ ಮುಖ್ಯವಾಗಿ ಸಮಾಜವೊಂದು ಸುಸ್ಥಿತಿಯಲ್ಲಿರಲು ಅನುಸರಿಸಬೇಕಾದ ನೀತಿ ಸಂಹಿತೆಗಳನ್ನು, ಧರ್ಮಶಾಸ್ತ್ರಕ ವಿಷಯಗಳನ್ನೂ ಹೇಳುತ್ತದೆ. ಹೀಗೆ ಹೇಳುವಾಗ ಆನುಷಂಗಿಕವಾಗಿ ತನ್ನ ಕಾಲದ ಅನೇಕ ಜನಸಾಮಾನ್ಯ ವಿಷಯಗಳನ್ನು ಕೃತಿಯಲ್ಲಿ ಪ್ರಸ್ತಾಪಿಸಿದ್ದಾನೆ. ಹಾಗಾಗಿಯೇ ಕಂಬಳಿಯ ಕುರಿತಾದ ಸುದೀರ್ಘವಾದ ವಿವರಣೆ ಈ ಕೃತಿಯಲ್ಲಿ ದೊರೆಯುತ್ತದೆ.

"ರೋಮಗಳನ್ನು ಕೊಡುವ ಕುರಿಗಳಿಗೆ ಅವಿಯೆಂದೂ ಅವುಗಳ ರೋಮಕ್ಕೆ ಅವಿಕವೆಂದೂ ಹೆಸರು. ಅವುಗಳಲ್ಲಿ ಶುದ್ಧ ಬಿಳಿ ಬಣ್ಣದ್ದು, ಶುದ್ಧ ಕೆಂಪು ಬಣ್ಣದ್ದು, ಒಂದು ಬದಿಯಲ್ಲಿ ಕೆಂಪು ಬಣ್ಣವುಳ್ಳದ್ದೆಂದು ೩ ವಿಧ. ಸೂಜಿಯಿಂದ ನೇಯ್ದು ತಯಾರಿಸಿದ್ದು, ನೇಯುವಾಗ ವೈಚಿತ್ರ್ಯ ಉಂಟು ಮಾಡಿದ್ದು, ಸೂಜಿಯಿಂದ ನೇಯ್ದು ಇಲ್ಲವೆ ಮಗ್ಗದಲ್ಲಿ ನೇಯ್ದು ಅನೇಕ ತುಂಡುಗಳನ್ನು ಕೂಡಿಸಿ ಮಾಡಿದ್ದು ಮಧ್ಯದಲ್ಲಿ ನೇಯದೆ ಬಿಟ್ಟ ನೂಲುಗಳಿಂದ ತೂತುಗಳಿದ್ದು ಕಿಟಕಿಗೆ ಹಾಕಲು ಉಪಯುಕ್ತವಾದದ್ದು ಎಂದು ೪ ವಿಧ.

ಕಂಬಳಿ ಕಾಡಿನಲ್ಲಿ ತಿರುಗಾಡುವಾಗ ತಲೆಗೆ ಹಾಕಿಕೊಳ್ಳುವ ಟೊಪ್ಪಿ, ಆನೆಯ ಮೇಲೆ ಹಾಕಲಿರುವುದು, ಅದೇ ಕಪ್ಪು ಬಣ್ಣವುಳ್ಳದ್ದಾಗಿ ಆನೆಯ ಮೇಲೆ ಹಾಕಿದ ಕಂಬಳಿಯ ಮೇಲೆ ಹಾಕುವಂಥದ್ದು. ಕುದುರೆಯ ಅಸ್ತರಣ, ವರ್ಣಕಂಬಳಿ, ಕಲಿಚ್ಛಕವೆಂಬ ಕಂಬಳಿ ವಿಶೇಷ, ಅಂಗಿಗೆ ಉಪಯೋಗಿಸುವುದು ನಿರ್ಮಾಣ ವೈಚಿತ್ರ್ಯದಿಂದ ಅಗಲವುಳ್ಳದ್ದಾಗಿ ತೋರುವುದು, ಸಮಂತ ಭದ್ರಕವೆಂಬ ಕಂಬಳಿ ವಿಶೇಷ. ಇವು ಕುರಿಯ ಕಂಬಳಿಯ ಭೇದಗಳು. ನುಣುಪಾಗಿ ತೋರುವುದು, ಒದ್ದೆಯಾಗಿರುವಂತೆ ತೋರುವುದು, ಸೂಕ್ಷ್ಮವಾಗಿರುವುದು, ಮೃದುವಾಗಿರುವುದು ಶ್ರೇಷ್ಠ ಕಂಬಳಿಯ ಗುಣಗಳು.

ನೇಯಿಗೆಯ ಎಂಟು ಖಂಡಗಳ ಸಂಘದಿಂದ ನಿಷ್ಪನ್ನವಾಗಿಯೂ, ಕಪ್ಪಾಗಿಯೂ ಮಳೆಯ ಬಾಧೆಯನ್ನು ತಡೆಯಲು ಸಾಧನವಾಗಿಯೂ ಇರುವುದು ಭಂಗಿಸಿ, ಅಪಸಾರಕವೆಂಬುದು ಮತ್ತೊಂದು. ಹೀಗೆ ೨ ನೇಪಾಲ ದೇಶದಲ್ಲಿ ತಯಾರಾಗುವುದು.

ಸಂಪುಟಿಕಾ, ಚತುರಶ್ರಿಕಾ, ಲಂಬರಾ, ಕಟವಾನಕ, ಪ್ರಾವರಿಕ, ಸತ್ತಲಿಕಾ ಎಂದು ಮೃಗಗಳ ರೋಮದಿಂದ ಆರು ವಿಧದ ಕಂಬಳಿಗಳನ್ನು ತಯಾರಿಸುತ್ತಾರೆ[೧೬] ಎಂದು ಕಂಬಳಿಯ ಕುರಿತಾದ ವಿವರಣೆಯನ್ನು ಅರ್ಥಶಾಸ್ತ್ರಜ್ಞ ಕೊಡುತ್ತಾನೆ. ಆ ಕಾಲದಲ್ಲಿ ಕಂಬಳಿ ಇಂದಿಗಿಂತಲೂ ವೈವಿಧ್ಯಮಯವಾಗಿ ಬಳಕೆಯಲ್ಲಿತ್ತು ಎಂಬ ಮಾಹಿತಿ ಈ ಕೃತಿಯಲ್ಲಿ ದೊರೆಯುತ್ತದೆ. ಅಲ್ಲದೆ ಉಣ್ಣೆ ಮೊದಲಾದವುಗಳಿಂದ ನೂಲ ಮಾಡಿಸಿ ಬಟ್ಟೆ ನೇಯಿಸಲು ಒಬ್ಬ ವ್ಯಕ್ತಿಯನ್ನು ನೇಮಿಸಿ ಅವನಿಗೆ 'ಸೂತ್ರಾಧ್ಯಕ್ಷ:' ಎಂದು ಕರೆಯುತ್ತಿದ್ದು ಅವನ ಕರ್ತವ್ಯಗಳನ್ನೂ ನಿಗದಿಪಡಿಸಲಾಗಿರುತ್ತಿತ್ತು ಎಂಬ ಅಂಶ ಸ್ಪಷ್ಟವಾಗುತ್ತದೆ.[೧೭]

ನಂತರ ವಚನ ಸಾಹಿತ್ಯದಲ್ಲಿಯೂ ಕಂಬಳಿಯ ಉಲ್ಲೇಖವನ್ನು ಈ ಮುಂದಿನಂತೆ ಕಾಣುತ್ತೇವೆ.

ಕುದುರನೇಸ ತೊಳೆದಡೆಯೂ ಕೆಸರು ಮಾಬುದೆ?
ಎನ್ನ ಕಾಯದಲುಳ್ಳ ಅವಗುಣಂಗಳ ಕಳೆದು ಕೃಪೆಯ ಮಾಡಯ್ಯಾ,
ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣಿರೇ ಎನ್ನ ಮನ,
ಕೂಡಲ ಸಂಗಮದೇವಾ, ನಿಮಗೆ ಶರಣರೆಂದು ಶುದ್ಧಕಾಣಯ್ಯಾ[೧೮]

ಬಸವಣ್ಣನವರ ಆತ್ಮ ವಿಮರ್ಶೆಯ ಹಲವಾರು ವಚನಗಳಲ್ಲಿ ಇದೂ ಒಂದು. 'ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣಿರೇ ಎನ್ನ ಮನ' ಎಂಬಲ್ಲಿ ಬಸವಣ್ಣನವರು ವಿಷಯ ಸುಖಗಳಿಂದ ತಮಗೆ ಮುಕ್ತ ರಾಗಲಾಗುತ್ತಿಲ್ಲ ಎಂದು ಹೇಳುವುದಕ್ಕೆ ಹೋಲಿಕೆಯನ್ನು ಕೊಡುತ್ತಾರೆ. ಕಂಬಳಿಯಲ್ಲಿ ಕಣಕವ ನಾದಿದಷ್ಟೂ ಅದು ಕಂಬಳಿಗೇ ಅಂಟಿಕೊಳ್ಳುತ್ತದೆ. ಹಾಗೇ ಲೌಕಿಕ ವಿಷಯ ಸುಖಗಳಿಂದ ಮುಕ್ತರಾಗಬೇಕೆಂದಷ್ಟೂ ಅದರಿಂದ ಹೊರಬರಲಾಗುತ್ತಿಲ್ಲ ಎನ್ನುತ್ತಾರೆ. ಹೀಗೆ ಕಂಬಳಿಯು ಬಳಕೆಯ ರೂಪದಿಂದ ಭಿನ್ನವಾದ ಸಾಹಿತ್ಯರೂಪದಲ್ಲಿ ಅಲಂಕಾರವಾಗಿಯೂ ಒಡಮೂಡಿರುವುದನ್ನು ಕಾಣುತ್ತೇವೆ.

'ಬಸವರಾಜ ದೇವರ ರಗಳೆ'ಯಲ್ಲಿ ಹರಿಹರ ಗೋವಳನ ಚಿತ್ರಣವನ್ನು ಚಿತ್ರಿಸುವಲ್ಲಿ ಕಂಬಳಿಯನ್ನು ಉಲ್ಲೇಖಿಸುತ್ತಾನೆ. 'ಹೆಗಲ ಕಂಬಳಿ ಕೈಯಕಲ್ಲಿಯೋಗರದಿಂದೆ'[೧೯] ಎನ್ನುವಲ್ಲಿ ಕಂಬಳಿ ಗೋಪಾಲಕರಿಗೆ ಅವಶ್ಯಕತೆಯಾಗಿ ಅವರ ಬದುಕಲ್ಲಿ ಒಂದಾದ ಪರಿಯನ್ನು ಕಾಣುತ್ತೇವೆ.

೧೫ನೇ ಶ.ದ ಪ್ರಮುಖ ಕವಿ ಕುಮಾರವ್ಯಾಸ ತನ್ನ 'ಕರ್ಣಾಟ ಭಾರತ ಕಥಾ ಮಂಜರಿ'ಯಲ್ಲಿ 'ಮಿಸುಪ ಕಂಬಳಿ ಕೊಂಬು ಕಲ್ಲಿಯ...'[೨೦] ಎಂಬ ಪದ್ಯದಲ್ಲಿ ಗೋಪಾಲಕನಿಗೆ ಕಂಬಳಿ ಅವನ ನಿತ್ಯ ಬದುಕಿನ ಅವಶ್ಯಕತೆಗಳಲ್ಲಿ ಒಂದು ಎಂಬ ಚಿತ್ರಣವನ್ನು ಕೊಡುತ್ತಾನೆ.

ನಮ್ಮ ಸಮಾಜದಲ್ಲಿ ಕಂಬಳಿಗೆ ತನ್ನದೇ ಆದ ಪೂಜ್ಯಭಾವವಿದೆ. ಇದಕ್ಕೆ ಮೈಲಿಗೆಯಿಲ್ಲ ಎಂಬ ನಂಬಿಕೆಯೂ ನಮ್ಮಲ್ಲಿದೆ. ಆದರೆ ಇದಕ್ಕೆ ತೀರ ವಿರುದ್ಧವಾದ ಅಭಿಪ್ರಾಯವೊಂದು ಪುರಂದರದಾಸರ ಕೀರ್ತನೆಯಲ್ಲಿ ದೊರೆಯುತ್ತದೆ. 'ಮಾನಹೀನನಿಗೆ ಅಭಿಮಾನವೇಕೆ?' ಎಂದು ಪ್ರಾರಂಭವಾಗುವ ಕೀರ್ತನೆಯಲ್ಲಿ 'ಕಂಬಳಿಯ ಹೊದೆವವಗೆ ಮಡಿಯೇತಕೆ?'[೨೧] ಎಂಬ ಸಾಲು ದೊರೆಯುತ್ತದೆ. ಇಲ್ಲಿ ಕಂಬಳಿ ಮೈಲಿಗೆಯಾದುದು, ಮಡಿತನಕ್ಕೆ ಯೋಗ್ಯವಾದುದಲ್ಲ ಎಂಬ ತುಚ್ಛೀಕೃತ ಮನೋಭಾವ ಕಾಣುತ್ತೇವೆ. ಅಂದರೆ ಕಂಬಳಿಯನ್ನು ಹೀನವಾಗಿ ಕಾಣುವ ಸಮಾಜ-ವರ್ಗವೊಂದು ಆ ಕಾಲಕ್ಕಿತ್ತು ಎಂಬ ವಿವರಣೆ ಈ ಕೀರ್ತನೆಯ ಮುಖೇನವಾಗಿ ದೊರೆಯುತ್ತದೆ.

ಕನಕದಾಸ ವಿರಚಿತ 'ಮೋಹನ ತರಂಗಿಣಿ'ಯಲ್ಲಿಯೂ ಕಂಬಳಿಯ ವಿಷಯಕ ಮಾಹಿತಿ ದೊರೆಯುತ್ತದೆ. ಒಂದು ದಿನ ಮಳೆಗಾಲದಲ್ಲಿ ಬಿಡದೇ ಧಾರಾಕಾರವಾಗಿ ಮಳೆ ಸುರಿಯಿತು. ಕೆರೆ ತೊರೆಗಳು ತುಂಬಿ ಹರಿಯತೊಡಗಿದವು. ಇದನ್ನೆಲ್ಲ ಕೃಷ್ಣ ಸತಿಯರೊಂದಿಗೆ ಸಂತೋಷದಿಂದ ನೋಡುತ್ತಿರುವಾಗ 'ಊರವರು ಕೊಡೆ, ಮೇಣಗಪ್ಪಡ, ಗೊಂಗಡಿ ಬಹುರಮ್ಯ ಒಡೆದಿರ್ನಸಕಲಾತಿ'[೨೨] ಮೊದಲಾದವುಗಳಿಂದ ರಕ್ಷಣೆ ಪಡೆಯುತ್ತಿದ್ದರು ಎಂದು ಹೇಳಲಾಗಿದೆ. ಹಾಗಾಗಿ 'ಗೊಂಗಡಿ' ಎಂದಿನಿಂದಲೂ ಮನುಷ್ಯನಿಗೆ ಮಳೆ, ಚಳಿಗಳಿಂದ ರಕ್ಷಣೆಯನ್ನೊದಗಿಸುವ ಸಾಧನೆಯಾಗಿದ್ದಿತು ಎಂಬುದರ ಜೊತೆಗೆ ಕಂಬಳಿಗೆ, ವಿಜಯನಗರ ಸಾಮ್ರಾಜ್ಯದ ಕಾಲಕ್ಕಾಗಲೇ ಗೊಂಗಡಿ ಶಬ್ದವು ಪ್ರಚಲಿತದಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಕಾರಣ ವಿಜಯನಗರ ಸಾಮ್ರಾಜ್ಯವು ತೆಲಗು ನಾಡಿನೊಂದಿಗೆ ಹೊಂದಿದ ನಿಕಟ ಸಂಪರ್ಕದಿಂದಾಗಿ, ಕಂಬಳಿಗೆ ತೆಲಗು ರೂಪವಾದ 'ಗೊಂಗಡಿ' ಕನ್ನಡಿಗರ ಜನಬಳಕೆಯ ಪದವಾಗಿಯೂ ರೂಪು ಪಡೆಯಿತು.

ಇವಿಷ್ಟು ಲಭ್ಯ ಪ್ರಾಚೀನ ಕೃತಿಗಳಲ್ಲಿನ ಉಲ್ಲೇಖಗಳು. ಇದರಿಂದ ಕಂಬಳಿಯು ಕ್ರಿ.ಪೂ. ಕಾಲದಿಂದಲೇ ಜನಬಳಕೆಯ ವಸ್ತುವಾಗಿ ಪಶುಪಾಲಕರ ನಿತ್ಯ ಬದುಕಿನ ಅವಶ್ಯಕತೆಯಾಗಿ ಇಂದಿಗಿಂತಲೂ ಹೆಚ್ಚು ವೈವಿಧ್ಯಮಯವಾಗಿ ಬಳಕೆಯಲ್ಲಿತ್ತು ಎಂಬುದು ಮನವರಿಕೆಯಾಗುತ್ತದೆ.

**ಆಧುನಿಕ ಕೃತಿಗಳು (೧೯ನೆಯ ಶತಮಾನದಿಂದೀಚೆಗೆ)**

ಇಲ್ಲಿ ೧೯ನೆಯ ಶತಮಾನದಿಂದೀಚಿಗಿನ ಉಲ್ಲೇಖಗಳನ್ನು ಗಮನಿಸಲಾಗಿದೆ. ೧೯ನೆಯ ಶತಮಾನದಿಂದೀಚೆಗೆ ವಿಪುಲವಾದ ಸಾಹಿತ್ಯ ಕೃಷಿ ನಡೆದಿದ್ದು ಉಲ್ಲೇಖಗಳ ವ್ಯಾಪ್ತಿ ಹೆಚ್ಚಾಗುವ ಸಾಧ್ಯತೆಯಿಂದಾಗಿ ಇಲ್ಲಿ ಒಂದು ಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ. ಹಾಗಾಗಿ ಕೆಲವೇ ಕೆಲವು ಮಹತ್ವದ ಉಲ್ಲೇಖಗಳನ್ನು ಮಾತ್ರ ಇಲ್ಲಿ ಗಮನಿಸಲಾಗಿದೆ.

೧೯೩೭ರಲ್ಲಿ ರಚಿತವಾದ ಶಂ.ಬಾ.ಜೋಶಿಯವರ 'ಕರ್ನಾಟಕದ ವೀರಕ್ಷತ್ರಿಯರು' ಕೃತಿಯಲ್ಲಿ ಕಂಬಳಿಯ ಕುರಿತಾದ ಕೆಲವು ವಿಶೇಷ ಮಾಹಿತಿ ದೊರೆಯುತ್ತವೆ.

'ವೇದಕಾಲದಿಂದಲೇ ಕಂಬಳಿಯ ಹೆಸರು ಕೇಳಿ ಬರುತ್ತದೆ. ಅಥರ್ವಣ ವೇದದಲ್ಲಿ "ಕಂಬಲ" ಶಬ್ದವು ಬಂದಿದೆ ಎನ್ನುತ್ತಾರೆ.[೨೬] ಈ ಮಾಹಿತಿಯ ಲಭ್ಯತೆಯಿಂದಾಗಿ ಕಂಬಳಿ ಪದ ಹಾಗೂ ಅದರ ತಯಾರಿಕೆಯು ಪ್ರಾಚೀನತೆ ವೇದಕಾಲಕ್ಕಿಂತಲೂ ಹಿಂದೆ ಸರಿಯುತ್ತದೆ.

ಇದೇ ಗ್ರಂಥದ ಇನ್ನೊಂದೆಡೆಯಲ್ಲಿ ಮೊದಲು ವೇದದಲ್ಲಿ ಬಟ್ಟೆಗೆ ವಸನ, ವಸ್ತ್ರ, ವಾಸಸ್ ಎಂಬ ಪದಗಳಿವೆ ಎಂದಿದೆ. Mac-Done vedic index, Vol-II ರಲ್ಲಿ ಮ್ಯಾಕ್‌ಡೊನೆಲ್ಲರು ವಾಸಸ್ ಶಬ್ದವನ್ನು ಕುರಿತ ಟಿಪ್ಪಣಿಯಲ್ಲಿ "The clothes were often woven of sheeps wool" ಎಂದಿದ್ದನ್ನು ಶಂಭಾ ಜೋಶಿಯವರು ಉಲ್ಲೇಖಿಸುತ್ತಾರೆ.[೨೭] ವೇದ ಕಾಲದಲ್ಲಿ ಉಣ್ಣೆಬಟ್ಟೆಯ ಬಳಕೆಯೇ ಪ್ರಧಾನವಾಗಿದ್ದಿರ ಬಹುದು ಎನ್ನುವ ತರ್ಕಕ್ಕೆ ಈ ಹೇಳಿಕೆ ಪುಷ್ಟಿ ನೀಡುತ್ತದೆ. ವೇದಕಾಲಕ್ಕಾಗಲೇ ಉಣ್ಣೆಯ ಬಟ್ಟೆಗಳನ್ನು ನೇಯುವ ಕಲೆಗಾರಿಕೆ ಬೆಳೆದಿತ್ತೆಂದರೆ ಇದಕ್ಕೂ ಒಂದೆರಡು ಶತಮಾನಗಳಷ್ಟು ಹಿಂದೆಯೇ ವ್ಯವಸ್ಥಿತವಾದ ಕಂಬಳಿಯ ಪ್ರಾಚೀನತೆ ಇದ್ದಿರಬಹುದು ಎನ್ನುವುದು ಉತ್ಪ್ರೇಕ್ಷೆಯೆನ್ನಿಸಲಾರದು.

ಮತ್ತೊಂದು ಮಹತ್ವದ ಉಲ್ಲೇಖ ದೊರೆಯುವುದೆಂದರೆ ವ್ಹಿ.ಆರ್.ಹನುಮಂತಯ್ಯ ಅವರು 'ಭಾರತ ದೇಶದ ಕುರುಬರ ಚರಿತ್ರೆ' ಕೃತಿಯಲ್ಲಿ. V George ಚಕ್ರವರ್ತಿಗಳ ಪಟ್ಟಾಭಿಷೇಕ ಮಹೋತ್ಸವದ ವಿಶೇಷ ಸಂಚಿಕೆ(೧೯೧೧ ಡಿಸೆಂಬರ್. ದೆಹಲಿ)ಯಲ್ಲಿ H.I.Mejestyಯವರು ಹೇಳಿದಂತೆ 'ವೇದ ಕಾಲಕ್ಕಾಗಲೇ ಸ್ವಂತವಾಗಿ ಉಣ್ಣೆಯನ್ನು ಹಿಂಜಿಕೊಂಡು ನೂಲನ್ನು ನೂತು ಕಂಬಳಿಗಳನ್ನು ನೇಯ್ದುಕೊಳ್ಳುತ್ತಿದ್ದರು. ಮತ್ತು ದಾನವಾಗಿ ಕೊಡುತ್ತಿದ್ದರು' ಎಂಬ ವಿವರಣೆಯಿದೆ.[೨೮] ಇದರಿಂದ ವೇದಕಾಲದಲ್ಲಿ ಕಂಬಳಿ ನೇಯ್ಗೆಯ ವೃತ್ತಿಯು ವೈಯಕ್ತಿಕ ನೆಲೆಯಲ್ಲಿ ನಡೆಯುತ್ತಿದ್ದಿರಬಹುದೆಂದು ಊಹಿಸಬಹುದಾಗಿದೆ. ಅಲ್ಲದೇ ಆ ಕಾಲದಲ್ಲಿ ಅನ್ನದಾನ, ವಿದ್ಯಾದಾನಗಳಂತೆ ಕಂಬಳಿದಾನವೂ ಕೂಡ ಮಹತ್ವ ಪಡೆದಿತ್ತೆನ್ನಿಸುತ್ತದೆ.

ಇದೇ ಕೃತಿಯಲ್ಲಿ ಅಲ್ಲಿಯೇ ವೇದಿಕ್‌ಕ್ವಟೇಶನ್ from Rigveda by Dr. D.H.Grimswold ಹೇಳಿದ "ಪಶುಪಾಲನ, ವ್ಯವಸಾಯ, ಕಂಬಳಿ ನೇಯ್ಗೆಯ ಕಸುಬು (ಕುಶಲ ಕೈಗಾರಿಕೆ) ಪ್ರಾಚೀನವೂ ಪಾವಿತ್ರ್ಯವೂ ಆದ ವೇದೋಕ್ತ ವೃತ್ತಿಗಳಾಗಿರುತ್ತವೆಂಬುದು ಸ್ಪಷ್ಟವಾಗುತ್ತದೆ" ಎಂಬ ಅಂಶವನ್ನು ಉದ್ಧರಿಸಲಾಗಿದೆ.[೨೯] ಇದರಿಂದ ಕಂಬಳಿ ನೇಯ್ಗೆಯ ವೃತ್ತಿಯು ಅತ್ಯಂತ ಪ್ರಾಚೀನವೂ ಪವಿತ್ರವೂ ಆದ ವೃತ್ತಿ ಎಂಬ ಅಂಶ ಸ್ಪಷ್ಟವಾಗುತ್ತದೆ.

ಜನಾಂಗಿಕ ಅಧ್ಯಯನ, ಸಂಸ್ಕೃತಿ ಶೋಧದಲ್ಲೊಂದು ಮೈಲುಗಲ್ಲಾದ ಕೃತಿ ರಾಹುಲ ಸಾಂಕೃತ್ಯಾಯನ ಕೃತ 'ವೋಲ್ಗಾಗಂಗಾ'. ಇದರ ಮೂರನೆಯ ಕಥೆ ಅಮೃತಾಶ್ವದಲ್ಲಿ ಕ್ರಿ.ಪೂ. ೩೦೦೦ದಲ್ಲಿ ಉತ್ತರ ಕುರುಪ್ರದೇಶದಲ್ಲಿ ಬೆಳೆದ ಮನುಷ್ಯ ನಾಗರಿಕತೆಯನ್ನು ಹೇಳುತ್ತ "ತರುಣಿಯಂತೆಯೇ ಆತನೂ ಮೈಮೇಲೆ ಬಿಳಿಯ ಉಣ್ಣೆಯ ತೆಳ್ಳಗಿನ ಕಂಬಳಿಯೊಂದರ ಎರಡು ತುದಿಗಳನ್ನು ಎಡಹೆಗಲಿಗೆ ಕಟ್ಟಿ ಇಳಿಸಿಕೊಂಡಿದ್ದಾನೆ. ಎಡಪಾರ್ಶ್ವದ ಎದೆ, ಮೊಣಕಾಲುಗಳು ಕೆಲಭಾಗವಲ್ಲದೇ ಉಳಿದೆಲ್ಲ ಶರೀರ ಭಾಗಗಳೂ ಕಂಬಳಿಯಿಂದ

ಮುಚ್ಚಿವೆ''[೨೭] ಎಂಬ ಚಿತ್ರಣ ಕೊಡುತ್ತಾರೆ. ಇದು ಕ್ರಿ.ಪೂ. ೩೦೦೦ ಕಾಲಕ್ಕಾಗಲೇ ಮಾನವರು ಕಂಬಳಿಯನ್ನು ದೇಹ ಮುಚ್ಚಿಕೊಳ್ಳುವ ವಸ್ತ್ರವಾಗಿ ಹೆಣ್ಣುಗಂಡೆಂಬ ಭೇದವಿಲ್ಲದೇ ಬಳಸುತ್ತಿದ್ದರೆಂಬ ಎಂಬ ಅಂಶವನ್ನು ಬೆಳಕಿಗೆ ತರುತ್ತದೆ. ಇದೇ ಕಥೆಯಲ್ಲಿ ತಿಳಿದು ಬರುವ ಇನ್ನೊಂದು ಮುಖ್ಯಾಂಶವೆಂದರೆ ``ಕುರುಜನರ ಹೆಣ್ಣು ಉಣ್ಣೆಯಿಂದ ಹುರಿ ತಯಾರಿಸುವುದರಲ್ಲಿ ಕಂಬಳಿ ನೇಯುವುದರಲ್ಲಿ ಬಲು ಜಾಣರಾಗಿದ್ದರು''[೨೮] ಎನ್ನುವುದು. ಇದರಿಂದ ಆ ಕಾಲಕ್ಕಾಗಲೇ ಹೆಣ್ಣು ಕಂಬಳಿ ನೇಯ್ಗೆಯನ್ನು ಅರಿತಿದ್ದಳಷ್ಟೇ ಅಲ್ಲ ಆ ವೃತ್ತಿಯಲ್ಲಿ ನಿಷ್ಣಾತಳೂ ಆಗಿದ್ದಳೆನ್ನಬಹುದು.

ಇನ್ನೊಂದು ಕಥೆ ಪುರುಹೂತದಲ್ಲಿ ಕ್ರಿ.ಪೂ. ೨೫೦೦ರಲ್ಲಿನ ತಜಕಿಸ್ತಾನ ಪ್ರದೇಶದ ಮಾನವ ಜೀವನದ ಕಥೆಯನ್ನು ಹೇಳುತ್ತ "ಆತನ ಮೈಮೇಲೆ ಕಂಬಳಿಯ ಕಂಚುಕ, ಉಟ್ಟಿದ್ದುದೂ ಕಂಬಳಿಯದೇ ಅಧೋ ವಸ್ತ್ರ" ಎಂದು ಆ ಕಾಲದ ಮಾನವನ ವಸ್ತ್ರವಿನ್ಯಾಸವನ್ನು ಚಿತ್ರಿಸುತ್ತಾರೆ. ಹೀಗೆ ಪ್ರಾದೇಶಿಕ ಭಿನ್ನತೆಯಿಲ್ಲದೇ ಮನುಷ್ಯ ಇದ್ದಲ್ಲೆಲ್ಲ ಒಂದಿಲ್ಲ ಒಂದು ಬಗೆಯಲ್ಲಿ ಪ್ರಾಚೀನ ಕಾಲದಿಂದಲೂ ಈ ವಸ್ತ್ರ ಬಳಕೆಯಾಗುತ್ತಲೇ ಬಂದಿದೆ ಎನ್ನುವುದು ಮನದಟ್ಟಾಗುತ್ತದೆ.

ಇಷ್ಟು ಲಭ್ಯ ಪ್ರಾಚೀನ ಮತ್ತು ಆಧುನಿಕ ಕೃತಿಗಳ ಉಲ್ಲೇಖಗಳನ್ನಿಟ್ಟುಕೊಂಡು ನೋಡಿದಾಗ ಕಂಬಳಿ ಆದಿಮಾನವನಿಂದ ಹಿಡಿದು ನಾಗರಿಕ ಮನುಷ್ಯನವರೆಗೆ ಮೊದಲು ದೇಹಸಂರಕ್ಷಣೆಯ ವಸ್ತ್ರ ಮಾತ್ರವಾಗಿ ನಂತರದಲ್ಲಿ ಸಂಸ್ಕೃತಿಯ ಭಾಗವಾಗಿ ಜನಪದ ಬದುಕಿನಲ್ಲಿ ಸೇರಿಕೊಂಡ ಬಗೆಯನ್ನು ಈ ಎಲ್ಲ ಉಲ್ಲೇಖಗಳು ವಿವರಿಸುತ್ತವೆ.

## III. ಜನಪದ ಸಾಹಿತ್ಯ

ಜನಪದ ಸಾಹಿತ್ಯ ಜನಪದರ ಬದುಕಿನ ಪ್ರತಿಬಿಂಬವೇ ಆಗಿರುತ್ತದೆ. ಬದುಕಿನ ರೀತಿ-ನೀತಿಗಳು, ನಂಬಿಕೆ -ಸಂಪ್ರದಾಯಗಳು, ನಿತ್ಯದ ಬದುಕಿನ ವಿಷಯಗಳೆಲ್ಲವನ್ನೂ ಸಾಹಿತ್ಯದಲ್ಲಿ ಅವರು ಒಡಮೂಡಿಸುವ ಪರಿ ಅಚ್ಚರಿಯನ್ನುಂಟು ಮಾಡುತ್ತದೆ. ಜನಪದ ಸಾಹಿತ್ಯದ ಮುಖೇನವಾಗಿ ವಸ್ತು, ವಿಷಯವೊಂದರ ಕುರಿತು ಅವರ ಮನೋಭಾವ, ತಿಳುವಳಿಕೆಗಳನ್ನು ಒರೆಗೆ ಹಚ್ಚಬಹುದು. ಈ ಸಾಹಿತ್ಯವನ್ನು ಗಾದೆ, ಒಗಟು, ಕಥೆ, ಪದ್ಯ ಮುಂತಾದ ಬಗೆಗಳಲ್ಲಿ ಕಾಣುತ್ತೇವೆ. ಇಂಥ ಜನಪದ ಸಾಹಿತ್ಯದಲ್ಲಿಯೂ ಕಂಬಳಿಯ ಕುರಿತಾದ ಉಲ್ಲೇಖವನ್ನು ಅಲ್ಲಲ್ಲಿ ಮುಂದಿನಂತೆ ಕಾಣಬಹುದಾಗಿದೆ.

### ೧. ಗಾದೆ

ಗಾದೆಗಳು ಜನಪದರ ಅನುಭವದ ಅಭಿವ್ಯಕ್ತಿಗಳಾಗಿವೆ. ಇವುಗಳಲ್ಲಿ ವಸ್ತು ಒಂದರ ಕುರಿತಾಗಿ ಸಮಾಜವೊಂದರ ಅಭಿಪ್ರಾಯ, ಮನಸ್ಥಿತಿ ವ್ಯಕ್ತಗೊಂಡಿರುತ್ತದೆ. ಅಂತೆಯೇ 'ಅಂಗಡಿ ಮಾರಿ ಗೊಂಗಡಿ ಹೊದ್ದ' ಎಂಬ ಗಾದೆ ಸ್ಥಿತಿವಂತನಾಗಿದ್ದ ವ್ಯಕ್ತಿಯೊಬ್ಬ ತನ್ನ ಕೈಯಾರೆ ತಾನೇ ಎಲ್ಲವನ್ನೂ ಕಳೆದುಕೊಂಡು

ಸಾಮಾನ್ಯ ಸ್ಥಿತಿಗಿಳಿದ ಎಂಬುದನ್ನು ಸೂಚಿಸುವುದರ ಜೊತೆಗೆ ಗೊಂಗಡಿ ಜನಸಾಮಾನ್ಯನ ಪ್ರತಿನಿಧಿಯಾಗಿರುವುದನ್ನೂ ಪ್ರಾಸ ಸಹಿತ ಹೇಳುತ್ತದೆ.

**೨. ಒಗಟು**

ಜನಪದರು ಬುದ್ಧಿಮತ್ತೆಯನ್ನು ಸವಾಲಿಗೊಡ್ಡುವ ರೀತಿಯಲ್ಲಿ ಒಗಟುಗಳನ್ನು ಬಳಸುತ್ತಾರೆ. ಸಾಮಾನ್ಯ ವಿಷಯವನ್ನು ಅತ್ಯಂತ ರಹಸ್ಯವಾಗಿ ನಿರೂಪಿಸುವ ಕುಶಲತೆಯನ್ನು ಈ ಒಗಟುಗಳಲ್ಲಿ ಕಾಣುತ್ತೇವೆ.

“ಕರ್‍ರನ್ನಕ್ಕಿದು ತಿಂಡಿ ಹೋತು
ಕೆಂಪನ್ನಕ್ಕಿದು ತಂಡಿ ಹೋತು
ಜಾಣಬಲ್ಲವ ಒಡೆದು ಹೇಳೋ”[೨೯]

ಎಂದು ಸವಾಲೊಡ್ಡುತ್ತಾರೆ. ಈ ಒಗಟಿಗೆ ಉತ್ತರ ಕಂಬಳಿ. ಕರ್‍ರನ್ನಕ್ಕಿದು ತಿಂಡಿ (ತುರಿಕೆ) ಹೋತು ಎನ್ನುವದು ಚರ್ಮರೋಗದ ಕೆಲವೊಂದು ರೋಗಗಳನ್ನು ಗುಣಪಡಿಸುವಲ್ಲಿ ಜನಪದರು ಇಂದಿಗೂ ಕಂಬಳಿಯನ್ನು ಬಳಸುವುದನ್ನು ಸೂಚಿಸಿದರೆ, ‘ಕೆಂಪನ್ನಕ್ಕಿದು ತಂಡಿ ಹೋತು’ ಎನ್ನುವುದು ಕಂಬಳಿ ಚಳಿಯಿಂದ ರಕ್ಷಣೆಯನ್ನೊದಗಿಸುತ್ತದೆ ಎನ್ನುವುದನ್ನು ಸೂಚಿಸುತ್ತದೆ. ಹೀಗೆ ಈ ಒಗಟು ಕಂಬಳಿಯ ಗುಣಲಕ್ಷಣಗಳನ್ನು ಹೇಳುವ ಮೂಲಕ ಎದುರಿನವನಿಗೆ ಉತ್ತರದ ಸೂಚನೆಯನ್ನೂ ಕೊಡುತ್ತದೆ.

**೩. ಪದ್ಯ ಸಾಹಿತ್ಯ**

ಜನಪದರಿಗೆ ಪದ್ಯಸಾಹಿತ್ಯ ಅನುಭವಗಳ ಅಭಿವ್ಯಕ್ತಿಗೆ ಒಂದು ಮಾಧ್ಯಮ. ನಿತ್ಯ ಬದುಕಿನ ಜಂಜಾಟವನ್ನೆಲ್ಲ ಮರೆತು ಸುಖವನ್ನನುಭವಿಸಲು ಈ ಸಾಹಿತ್ಯ ನೆರವಾಗುತ್ತದೆ. ಜನಪದರೇ ಕಟ್ಟಿದ ಈ ಪದಗಳನ್ನು ಅವರೇ ಹಾಡಿ ಸಂತಸವನ್ನನುಭವಿಸುವುದರ ಮೂಲಕ ಅವು ನಿತ್ಯ ನೂತನವಾಗುತ್ತವೆ.

ಡೊಳ್ಳಿನ ಹಾಡುಗಳು ಪ್ರಧಾನವಾಗಿ ಕುರುಬರ ಹಾಡುಗಳು. ಇವು ಒಂದು ವಿಧದಲ್ಲಿ ಭಕ್ತಿಗೀತೆಗಳಾಗಿವೆ. ಕುರುಬರು ತಮಗೆ ದೈವಿಕವೆನ್ನಿಸಿದ, ಪೂಜ್ಯಭಾವ ಹುಟ್ಟಿಸುವ ವಿಷಯಗಳ ಮೇಲೆಲ್ಲ ಹಾಡುಕಟ್ಟುತ್ತಾರೆ. ಹಾಗಾಗಿಯೇ ಕಂಬಳಿಯ ಕುರಿತಾದ ಅನೇಕ ಡೊಳ್ಳಿನ ಹಾಡುಗಳನ್ನು ಕಾಣುತ್ತೇವೆ(ಅವುಗಳನ್ನು ಅನುಬಂಧದಲ್ಲಿ ಕೊಡಲಾಗಿದೆ). ಈ ಹಾಡುಗಳಲ್ಲೆಲ್ಲ ಕಂಬಳಿಯ ಕುರಿತು ಪೂಜ್ಯತೆಯ ದೃಷ್ಟಿಯಿದೆ. ಅಲ್ಲದೇ ಅದರ ಉಪಯೋಗಗಳ ವೈವಿಧ್ಯತೆಯ ಕುರಿತಾಗಿಯೂ ಹಾಡುತ್ತಾರೆ.

ವಿನೋದರೂಪದ ಒಂದು ಪದ್ಯದಲ್ಲಿಯೂ ಕಂಬಳಿಯ ಉಲ್ಲೇಖ ದೊರೆಯುತ್ತದೆ. ಆ ಪದ್ಯದಲ್ಲಿ “ಒಬ್ಬೋನ ಹಾಸಿದ್ದೆ ಒಬ್ಬೋನ ಹೊದ್ದಿದ್ದೆ” ಎಂದು ಅಪಾರ್ಥಕ್ಕೆಡೆ ಮಾಡಿಕೊಡುವಂತೆ ಹೇಳುತ್ತಾಳೆ. ಅವರ್‍ಯಾರ್‍ಯಾರು ಎಂದಾಗ “ಹಾಸಿಗೀ ಹಾಸಿದ್ದೆ ಕಂಬಳಿ ಹೊದ್ದಿದ್ದೆ”[೩೦] ಎಂದು ಚಮತ್ಕಾರದ ಉತ್ತರ ಕೊಡುತ್ತಾಳೆ. ಹೀಗೆ ಕಂಬಳಿ ಜನಪದ ಜೀವನದಲ್ಲಿ ಹೊದಿಕೆಯಾಗಿ ಬಳಕೆಯಾಗಿರುವುದನ್ನು ಕಾಣುತ್ತೇವೆ.

ಕರಿಯ ಕಂಬಳಿ ಧರಮಾರೋ

ಭಕ್ತಗ್ಹರಕಿಯ ಕೊಟ್ಟಾರೋ[೨೧]

-ಎಂಬ ಸಾಲು ಹರಕೆಯ ಹಾಡಿನ ಪದ್ಯವೊಂದರಲ್ಲಿ ಬರುತ್ತದೆ. ಇಲ್ಲಿ ಕರಿಯ ಕಂಬಳಿ ಪೂಜ್ಯತೆಯ ಸಂಕೇತ. ಅಂಥ ಕಂಬಳಿ ಹೊದ್ದ ಪೂಜಾರಿ ದೇವರಿಗೆ ಸಮಾನ ಎಂಬ ಜನಪದ ನಂಬಿಕೆ ಹೀಗೆ ಪದ್ಯವಾಗಿ ಸಾಹಿತ್ಯದಲ್ಲಿ ಒಡಮೂಡಿದೆ.

## ಹಾಲುಮತ ಕಾವ್ಯ-ಪುರಾಣಗಳು

ಹಾಲುಮತದವರ ಕುರಿತಾಗಿ ಅನೇಕ ಜನಪದ ಕಾವ್ಯಗಳು ಕಾಣದೊರೆಯುತ್ತವೆ. ಅಂಥವುಗಳಲ್ಲಿ ಗ್ರಂಥಸ್ಥಗೊಂಡ 'ಜನಪದ ಹಾಲುಮತ ಮಹಾಕಾವ್ಯ', 'ಸಿದ್ಧಮಂಕ ಚರಿತೆ, 'ತಗರ ಪವಾಡ' ಪ್ರಮುಖ ಕೃತಿಗಳು. ಇವು ಕುರುಬರ ಚರಿತ್ರೆಯನ್ನು ಪುರಾಣದ ಕಣ್ಣಿನಿಂದ ನೋಡಿವೆ. ಆ ಮೂಲಕ ಕುರುಬರ ಪೌರಾಣಿಕ ಚರಿತ್ರೆಯನ್ನು ಕಟ್ಟಿಕೊಡುವ ಕೆಲಸ ಮಾಡಿವೆ. ಹಾಲುಮತದವರ ಕುರಿತಾಗಿಯೇ ಇರುವ ಈ ಕಾವ್ಯಗಳಲ್ಲಿ ಕಂಬಳಿ ಪ್ರಕಟಗೊಂಡಿರುವುದು ವಿಶೇಷವೇನಲ್ಲ. ಅಂತೆಯೇ ಕುರುಬರ ಬದುಕಿಗೆ ಅನಿವಾರ್ಯವಾದ ಈ ಕಂಬಳಿ ಕುರಿತಾದ ಕೆಲವು ಮಹತ್ವದ ಮಾಹಿತಿಗಳು ಈ ಕಾವ್ಯಗಳಲ್ಲಿ ದೊರೆಯುತ್ತವೆ.

## ಜನಪದ ಹಾಲುಮತ ಮಹಾಕಾವ್ಯ

ಇದು ಜನಪದರು ಹಾಲುಮತದ ಚರಿತ್ರೆಯನ್ನು ಕಟ್ಟಿಕೊಂಡ ಒಂದು ವಿಶಿಷ್ಟ ಪರಿ. ಹಾಲುಮತದ ಹುಟ್ಟು, ದೈವಗಳ ಜೊತೆಗೆ ಅವರ ಬದುಕಿನ ರೀತಿನೀತಿಯನ್ನೂ ಹೇಳುತ್ತದೆ.

ಪ್ರಸ್ತುತ ಈ ಮಹಾಕಾವ್ಯದಲ್ಲಿ 'ಹುಟ್ಟುಗಂಬಳಿ' ಎಂಬ ವಿಶೇಷ ಕಂಬಳಿಯ ಪ್ರಸ್ತಾಪ ಬರುತ್ತದೆ.

'ಪದುಮಗೊಂಡ ನೊಯಿದಾ ಕಂಬಳಿ ಶಿವಲಿಂಗಮ್ಮ ನೂಲ ಮಾಡ್ಯಾಳ.' ಹೀಗೆ ಸತಿಪತಿಯರಿಬ್ಬರೂ ಕೂಡಿ ತಮ್ಮ ಮಗ ಮಡ್ಡಪ್ಪನಿಗಾಗಿ ಮೂರು ಮೊಳದ ಕಂಬಳಿಯೊಂದನ್ನು ತಯಾರಿಸುತ್ತಾರೆ. ಇದನ್ನೇ 'ಹುಟ್ಟುಗಂಬಳಿ' ಎಂದು ಕರೆದಿರುವರು. ಬಹುಶಃ ದುಬಟಿಯ ಬಳಕೆಗೂ ಪೂರ್ವದಲ್ಲಿ ಜನಪದರು ಕೂಸಿನ ಅಳತೆಯದೇ ಕಂಬಳಿಯನ್ನು ಬಳಸುತ್ತಿದ್ದು ಅದನ್ನು 'ಹುಟ್ಟುಗಂಬಳಿ' ಎಂದು ಕರೆಯುತ್ತಿದ್ದರೆನ್ನಿಸುತ್ತದೆ. ಇದರಿಂದ ಒಂದು ಕಾಲದಲ್ಲಿ ಮಕ್ಕಳಿಗಾಗಿಯೇ ಪ್ರತ್ಯೇಕವಾದ ಹುಟ್ಟುಗಂಬಳಿ ಎಂಬ ಕಂಬಳಿಯು ಬಳಕೆಯಲ್ಲಿತ್ತು ಎಂಬ ಮಾಹಿತಿ ಈ ಕಾವ್ಯದಲ್ಲಿ ದೊರಕಿದಂತಾಗುತ್ತದೆ.

## ಸಿದ್ಧಮಂಕ ಚರಿತೆ

ಹಾಲುಮತದ ಸಾಂಸ್ಕೃತಿಕ ಸಂಘರ್ಷದ ಜೊತೆಗೆ ಅನೇಕ ವಿಶಿಷ್ಟ ಸಂಗತಿಗಳನ್ನು ತೆರೆದಿಡುವ ಅಪರೂಪದ ಕಾವ್ಯಕೃತಿ. ಇದರಲ್ಲಿ ಕಂಬಳಿಗಳಲ್ಲಿ ಪೂಜ್ಯನೀಯವಾದ 'ಗದ್ದುಗೆ ಕಂಬಳಿ'(ಕಂಥೆ)ಯ ಕುರಿತಾದ ಉಲ್ಲೇಖ ದೊರೆಯುತ್ತದೆ.

ಅಚ್ಚರಿಯ ಕಂಬಳಿಗಳ ನೆಯ್ದಾಗ
ಉಚ್ಚಹದಿಂ ಶಿವಗೆಂದು
ಮಚ್ಚಿ ಗದ್ದುಗೆಯಿಕ್ಕಿ ಅರ್ಚಿಸಿ ಪೂಜಿಸಿ
ನಿಶ್ಚಿಂತನೆ ಗತಿಯೆಂದ (ಪುಟ ೬೨, ಪದ್ಯ ೬೪)

ಹೀಗೆ ಶಿವನಿಗೆ ಗದ್ದುಗೆ ಹಾಕಿ ಅರ್ಚಿಸುವ ವಿಧಾನವೊಂದರ ವಿವರಣೆ ಸಿಕ್ಕುತ್ತದೆ. 'ಕಂಬಳಿ ಕಂಥೆಯ ಪ್ರಸ್ತಾಪವು ಕುರುಬರು ಇಂದಿಗೂ ಪಾಲಿಸಿಕೊಂಡು ಬಂದಿರುವ ಸಂಪ್ರದಾಯವೊಂದರ ಪ್ರಾಚೀನತೆಗೆ ನಿದರ್ಶನವಾಗಿದೆ ಎನ್ನುತ್ತಾರೆ ಡಾ.ಎಫ್.ಟಿ.ಹಳ್ಳಿಕೇರಿ(ಪ್ರಸಾದ, ಲೇಖನ 'ಹಾಲುಮತ ಕುರಿತು ಒಂದು ವಿಶಿಷ್ಟ ಕೃತಿ ಸಿದ್ಧಮಂಕ ಚರಿತೆ'). ಇದರಿಂದ ಕಂಬಳಿ ಕಂಥೆಯ ಸಂಪ್ರದಾಯದಿಂದಾಗಿ ಕುರುಬರೊಂದಿಗೆ ಅನೇಕ ಸಾಮಾಜಿಕ ವರ್ಗಗಳಲ್ಲಿ ಕಂಬಳಿ ಪವಿತ್ರ ಸ್ಥಾನವನ್ನು ಪಡೆದಿರುವುದನ್ನು ಕಾಣುತ್ತೇವೆ.

**ತಗರ ಪವಾಡ**

ಇದೂ ಕೂಡ ಹಾಲುಮತದ ಸಾಮಾಜಿಕ ಸಂಘರ್ಷವನ್ನೊಳಗೊಂಡ ಒಂದು ವಿಶಿಷ್ಟ ಕಾವ್ಯಕೃತಿ. ಇದರಲ್ಲಿ 'ಮೂರೇಣಿನ ಕಂಥೆ' ಎಂಬ ವಿಶೇಷವಾದ ಕಂಬಳಿಯ ವಿವರವಿದೆ.

ಬಸವಣ್ಣ ಶಾಂತಮುತ್ತಯ್ಯನನ್ನು ಹಾಲುಮತಕ್ಕೆ ಗುರುವೆಂದು ಸಾರುತ್ತಾನೆ. ಆಗ ಶಾಂತಮುತ್ತಯ್ಯನು "ಹಾಲುಮತಕ್ಕೆ ನಾನು ಗುರುವೆನ್ನಲು ಗುರುತೇನು?" ಎಂದು ಕೇಳಿದಾಗ

ಮೂರು ಲೋಕಕೆ ಪ್ರಜ್ವಲಿಸುತಿಹ ಕುಲವೆಂದು
ಮೂರೇಣಿನ ಕಂಥೆಯನಿತ್ತ || (ಸಂಧಿ ೭, ಪದ್ಯ ೪೫)

ಹಾಲುಮತಕ್ಕೆ ಗುರುವೆಂದು ಪರಿಗಣಿತವಾದ ಸರವೂರು ಶಾಂತಮುತ್ತಯ್ಯನ ಒಡೆಯರ ಪಂರಪೆಯವರು ಇಂದಿಗೂ ಈ ಮೂರೇಣಿನ ಕಂಥೆಯನ್ನು ಬಳಸುವುದನ್ನು ಕಾಣುತ್ತೇವೆ. ಹೀಗೆ ಮೂರೇಣಿನ ಕಂಬಳಿಯು ಕುರುಬರಲ್ಲಿ ವಿಶೇಷ ಸ್ಥಾನ ಪಡೆದ ಬಗೆಯನ್ನು ಈ ಕಾವ್ಯದಲ್ಲಿ ಕಾಣುತ್ತೇವೆ.

ಇವಿಷ್ಟು ಹಾಲುಮತದ ಕೃತಿಗಳಲ್ಲಿ ದೊರೆಯುವ ಉಲ್ಲೇಖಗಳು. ಜನಪದ ಹಾಲುಮತ ಮಹಾಕಾವ್ಯ ಒಂದು ಅಪ್ಪಟ ಜನಪದ ಕಾವ್ಯ. ಆದರೆ ಸಿದ್ಧಮಂಕ ಚರಿತೆ ಮತ್ತು ತಗರ ಪವಾಡಗಳು ಲಿಖಿತ ಪರಂಪರೆಯಲ್ಲಿ ಹುಟ್ಟಿ ಮೌಖಿಕ ಪರಂಪರೆಯಲ್ಲಿ ಪ್ರಸರಣಗೊಂಡ ಕಾವ್ಯಗಳು. ಅಲ್ಲದೇ ಈ ಮೂರೂ ಕೃತಿಗಳು ಹಾಲುಮತವನ್ನೇ ಪ್ರಧಾನ ವಿಷಯವನ್ನಾಗಿಟ್ಟುಕೊಂಡು ರಚಿತವಾದವುಗಳು. ಹೀಗಾಗಿ ಇವುಗಳನ್ನು ಪ್ರತ್ಯೇಕವಾಗಿ ಹಾಲುಮತದ ಕುರಿತಾದ ಕೃತಿಗಳು ಎಂಬ ವಿಭಾಗ ಮಾಡಿಕೊಂಡು ಇಲ್ಲಿಯೇ ವಿಷಯಗಳನ್ನು ಗಮನಿಸಲಾಗಿದೆ.

ಒಟ್ಟಾರೆಯಾಗಿ ಕಂಬಳಿಯ ಅರ್ಥ, ವ್ಯಾಖ್ಯೆ, ಉಲ್ಲೇಖಗಳಲ್ಲಿ ನಾಗರಿಕತೆಯ ಮೊದಲ ಹಂತದಿಂದಲೇ ಕಂಬಳಿ ಮಾನವನ ಬದುಕನ್ನು ಆವರಿಸಿರುವುದನ್ನು, ವಸ್ತ್ರ ರೂಪದ ಈ ವಸ್ತುವು ದೇಶ, ಭಾಷೆಗಳ ಗಡಿಯನ್ನು

ಮೀರಿ ಎಲ್ಲೆಡೆಯಲ್ಲಿಯೂ ದೇಹ ಸಂರಕ್ಷಣೆಯ ವಸ್ತುವಾಗಿ ಮನುಷ್ಯನನ್ನು ರಕ್ಷಿಸುತ್ತಲೇ ಬಂದಿರುವುದನ್ನು ಕಾಣುತ್ತೇವೆ. ನಂತರದ ಹಂತದಲ್ಲಿ ಸಂರಕ್ಷಣೆಯ ಜೊತೆಗೆ ಮಾನವನ ರೀತಿ-ನೀತಿ, ಸಂಪ್ರದಾಯ ಆಚರಣೆಗಳಲ್ಲೆಲ್ಲ ಕಂಬಳಿ ವೈವಿಧ್ಯಮಯವಾದ ಬಳಕೆಯ ವಸ್ತುವಾಯಿತು. ಹೀಗೆ ಕಂಬಳಿ ಕುರುಬರು ಪಶುಪಾಲಕರಿಗಷ್ಟೇ ಅಲ್ಲದೆ ಎಲ್ಲಾ ಜನಪದರ ನಿತ್ಯ ಬದುಕಿನ ಒಂದು ಭಾಗವಾಗಿ ಬಳಕೆಗೊಳ್ಳುವ ವಸ್ತ್ರವಾಗಿ ಕಾಣುತ್ತೇವೆ.

**ಕೊನೆ ಟಿಪ್ಪಣಿಗಳು**

೧. ಸಂಸ್ಕೃತ-ಕನ್ನಡ-ನಿಘಂಟು- ಲೇಖಕರು ಜಿ.ಎನ್.ಚಕ್ರವರ್ತಿ
೨. ಕ.ಸಾ.ಪ ಕನ್ನಡ ನಿಘಂಟು ೨ನೆಯ ಸಂಪುಟ, ಪುಟ ೧೩೫೫
೩. ಕನ್ನಡ ಜಾನಪದ ಕೋಶ, ಪ್ರ.ಸಂ. ಎಚ್.ಎಲ್.ನಾಗೇಗೌಡ
೪. ಅಮರಕೋಶ, ಪುಟ ೧೪೩
೫. ಕ.ಸಾ.ಪ. ಕನ್ನಡ ನಿಘಂಟು ೩ನೆಯ ಸಂಪುಟ, ಪುಟ ೩.೨೯
೬. ಕರ್ನಾಟಕದ ಕುರುಬರು, ಪುಟ ೧೦೦
೭. ಗ್ರಾಮೀಣ ಗ್ರಹಿಕೆ, ಪುಟ ೧೯೯
೮. ಕುರುಬರ ಹೆಜ್ಜೆಗಳು, ಪುಟ ೨೩೩
೯. ಶ್ರೀ ವಿಠ್ಠಲ ಒಂದು ಮಹಾಸಮನ್ವಯ, ಪುಟ ೫೪-೫೫
೧೦. ಹಾಲ್ಮತೋತ್ತೇಜಕ ಪುರಾಣ, ಪುಟ ೧೪೧ ಮತ್ತು ಹಾಲುಮತದ ಪುರಾಣವು ಪುಟ ೧೯೯
೧೧. ಹಾಲಕೆನೆ- ಲೇಖನ ಡಾ.ಎಫ್.ಟಿ. ಹಳ್ಳಿಕೇರಿ, ಪುಟ ೨೫
೧೨. ಶ್ರೀ ವಿಠ್ಠಲ ಒಂದು ಮಹಾಸಮನ್ವಯ, ಪುಟ ೮೦
೧೩. ಅದೇ, ಪುಟ ೨೯೫
೧೪. ಮನುಸ್ಮೃತಿ, ಪುಟ ೪೪
೧೫. ಅದೇ, ಪುಟ ೪೩
೧೬. ಕೌಟಿಲ್ಯನ ಅರ್ಥಶಾಸ್ತ್ರ, ಪುಟ ೧೪೫
೧೭. ಅದೇ, ಪುಟ ೧೯೦
೧೮. ಸಮಗ್ರ ವಚನ ಸಂಪುಟ ೧, ಸಂ. ಡಾ.ಎಂ.ಎಂ.ಕಲಬುರ್ಗಿ, ಪುಟ ೬೫
೧೯. ಹರಿಹರನ ಬಸವರಾಜ ದೇವರ ರಗಳೆ ಸಂ. ಟಿ.ಎಸ್. ವೆಂಕಣ್ಣಯ್ಯ ೯ನೆಯ ಸ್ಥಲ, ೯೫ನೆಯ ಸಾಲು
೨೦. ಕರ್ಣಾಟ ಭಾರತ ಕಥಾ ಮಂಜರಿ, ವಿರಾಟಪರ್ವ ಪದ್ಯ ೩೮
೨೧. ಪುರಂದರ ಸಾಹಿತ್ಯ ದರ್ಶನ ಸಂ. ೩, ಪುಟ ೧೭೯
೨೨. ಕರ್ನಾಟಕ ಜನಜೀವನ, ಬೆಟಗೇರಿ ಕೃಷ್ಣಶರ್ಮ ಪುಟ ೧೦೦
೨೩. ಶಂಬಾ ಕೃತಿ ಸಂಪುಟ ೧, ಪುಟ ೩.೨೦

೨೪. ಅದೇ, ಪುಟ ೩೧೪

೨೫. ಭಾಗ ೧, ಹನುಮಂತಯ್ಯ ವ್ಹಿ.ಆರ್. ಪುಟ ೧೬

೨೬. ಅದೇ, ಪುಟ ೧೬

೨೭. ವೋಲ್ಗಾಗಂಗಾ, ಪುಟ ೪೯

೨೮. ಪುಟ ೫೯

೨೯. ವಕ್ತೃ: ಕರಿಯಪ್ಪ ಮುಪ್ಪಯ್ಯ ಪೂಜಾರಿ ಸಾ. ಬೀಳಗಿ

೩೦. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪುಟ ೪೯೫

೩೧. ಶ್ರೀ ಕೊಣ್ಣೂರು ಕರಿಸಿದ್ದೇಶ್ವರ ದೇವಸ್ಥಾನ, ಡಾ.ಶ್ರೀರಾಮ ಇಟ್ಟಣ್ಣವರ

## ಅಧ್ಯಾಯ ೩

# ಕಂಬಳಿ : ಸಂಪ್ರದಾಯ-ಆಚರಣೆ-ನಂಬಿಕೆಗಳು

ಸಂಪ್ರದಾಯ-ಆಚರಣೆ-ನಂಬಿಕೆಗಳು ಜನಪದರ ಭಾವನಾ ಬದುಕಿನೊಂದಿಗೆ ಬೆಸೆದುಕೊಂಡ ಬಹುಮುಖ್ಯ ವಿಷಯಗಳು. ಸಮಾಜವೊಂದರ ಮನಃಸ್ಥಿತಿಯನ್ನು ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ರೂಪಿಸುವಲ್ಲಿ ಇಂಥ ವಿಷಯಗಳೇ ಸಹಕಾರಿಯಾಗುತ್ತವೆ. ಆಚರಣೆ-ಸಂಪ್ರದಾಯ-ನಂಬಿಕೆಗಳು ಪ್ರಾದೇಶಿಕ ಸೀಮಿತತೆಯನ್ನು ಹೊಂದಿರುತ್ತವೆ. ಇವುಗಳಲ್ಲಿ ನಂಬಿಕೆಗಿಂತಲೂ ಸಂಪ್ರದಾಯಕ್ಕೆ ಹೆಚ್ಚಿನ ವ್ಯಾಪ್ತಿಯಿದೆ. ಮಾನಸಿಕ ಸ್ತರದಲ್ಲಿ ಆಳವಾಗಿರುವ ನಂಬಿಕೆ ಕ್ರಮೇಣ ಸಾಂಸ್ಕೃತಿಕ ಆವರಣಕ್ಕೆ ಬಂದಾಗ ಸಾಮಾಜಿಕ ಚೌಕಟ್ಟನ್ನು ಪಡೆದು ಕ್ರಿಯಾಶೀಲವಾಗಿ ಆಚರಣೆಗಳಿಗೆ ಹಿಗ್ಗುತ್ತದೆ.

Standard dictionary of folkloreನಲ್ಲಿ ಹೇಳುವಂತೆ "ಒಂದು ಗುಂಪು ಪರಂಪರಾನುಗತವಾಗಿ ಒಪ್ಪಿಕೊಂಡಿರುವ ಮಾನವನ ಕ್ರಿಯಾತ್ಮಕತೆಯನ್ನೇ ಸಂಪ್ರದಾಯ ಎನ್ನುವರು."[1] ಸಂಪ್ರದಾಯವೆನ್ನುವದು ವೈಯಕ್ತಿಕತೆಯನ್ನು ಒಳಗೊಳ್ಳುವುದಿಲ್ಲ. ಅದೇನಿದ್ದರೂ ಸಾಮೂಹಿಕ ಕ್ರಿಯಾಶೀಲತೆಯನ್ನು ಬಯಸುತ್ತದೆ. ಇದನ್ನು ಗಮನಿಸಿದರೆ ಸಂಪ್ರದಾಯ-ಆಚರಣೆಗಳು ಯಾವಾಗಲೂ ಸಾಮಾಜಿಕ ಸಂದರ್ಭದಲ್ಲಿಯೇ ಮುಂದುವರಿಯುತ್ತವೆಯೆನ್ನುವುದು ಸ್ಪಷ್ಟವಾಗುತ್ತದೆ. ಹೀಗೆ ಮುಂದುವರಿದುಕೊಂಡು ಬಂದ ಸಂಪ್ರದಾಯ -ಆಚರಣೆಗಳು ಆಯಾ ಸಮಾಜದ ಸಾಂಸ್ಕೃತಿಕ ಅನನ್ಯತೆಗಳಾಗಿ ಮಹತ್ವ ಪಡೆಯುತ್ತವೆ.

ಮೊದಲು ದೇಹ ಸಂರಕ್ಷಣೆಯ ವಸ್ತ್ರ ಮಾತ್ರವಾಗಿದ್ದ ಕಂಬಳಿ ತದನಂತರ ಸಮಾಜದಲ್ಲಿ ಸಂಪ್ರದಾಯ-ನಂಬಿಕೆಗಳ ಚೌಕಟ್ಟನ್ನು ಪಡೆದು ಆಚರಣೆಗಳ ಭಾಗವಾಗಿಯೂ ಹಿಗ್ಗಿರುವುದು ಹೀಗೆಯೇ. ಕುರಿ ಉಣ್ಣೆಯಿಂದ ಹಿಡಿದು ದಿನಬಳಕೆಯ ಕಂಬಳಿ, ಜಾಡಿ, ಕಂಥೆಯ ಸುತ್ತ ಹೆಣೆದುಕೊಂಡಿರುವ ಅನೇಕ ಆಚರಣೆ-ಸಂಪ್ರದಾಯಗಳನ್ನು ನೋಡಿದಾಗ ಜನಪದ ಜೀವನದಲ್ಲಿ ಕಂಬಳಿ ಪಡೆದ ಪ್ರಾಮುಖ್ಯತೆಯನ್ನು ಮನಗಾಣ ಬಹುದು. ಜೊತೆಯಲ್ಲಿಯೇ ಇಂಥ ಆಚರಣೆ-ಸಂಪ್ರದಾಯ-ನಂಬಿಕೆಗಳಂಥ ವಿಷಯಗಳು ಆಯಾ ಸಮಾಜದ ವಿಶಿಷ್ಟ ಸಾಂಸ್ಕೃತಿಕ ಅಂಶಗಳಾಗಿರುವುದರಿಂದ ಈ ವಿಷಯಗಳ ಅಧ್ಯಯನವೂ ಪ್ರಸ್ತುತ ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಬಹುಮುಖ್ಯ ಅಂಶವಾಗುತ್ತದೆ.

ಈ ಅಧ್ಯಾಯದಲ್ಲಿ ಸಂಪ್ರದಾಯ-ಆಚರಣೆಗಳೆರಡನ್ನೂ ಜೊತೆಜೊತೆಯಲ್ಲಿಯೇ ಗಮನಿಸಲಾಗಿದ್ದು, ನಂಬಿಕೆಗಳನ್ನು ಪ್ರತ್ಯೇಕವಾಗಿ ಚರ್ಚಿಸಲಾಗಿದೆ.

## I. ಸಂಪ್ರದಾಯ-ಆಚರಣೆ

ಯಾವ ಒಂದು ಆಚರಣೆಯಲ್ಲಿ ಪರಂಪರೆಯ ಮುದ್ರೆ ಕಂಡುಬರುತ್ತದೋ ಅದು ವ್ಯಷ್ಟಿರೂಪವನ್ನು ದಾಟಿ ಸಮಷ್ಟಿ ಸ್ವರೂಪವನ್ನು ಪಡೆದುಕೊಂಡು ಸಾಮೂಹಿಕ ವ್ಯವಹಾರದಲ್ಲಿ ಆಚರಣೆಯಾಗುತ್ತದೋ ಅಲ್ಲಿ ಸಂಪ್ರದಾಯವನ್ನು ಗುರುತಿಸಬಹುದು ಎನ್ನುವರು.[೨]

'ಕಂಬಳಿಯಿಲ್ಲದೇ ಕಾರ್ಯ ಆಗದು' ಎಂಬುದು ಜನಪದರ ಅಚಲ ನಂಬಿಕೆ. ಅಂತೆಯೇ ಬಹುತೇಕ ಶುಭಕಾರ್ಯಗಳಲ್ಲಿ ಕಂಬಳಿ ಅತ್ಯವಶ್ಯಕ. ಕಂಬಳಿ ಬಳಕೆಗೊಳ್ಳುವ ಸಂಪ್ರದಾಯ-ಆಚರಣೆಗಳನ್ನು ಒಂದು ಚಕ್ರದಂತೆ ಅಂದರೆ ಮದುವೆ ಆರಂಭದ ಕಾರ್ಯವಾದ ಕನ್ಯೆ ನೋಡುವುದರಿಂದ ಮೊದಲ್ಗೊಂಡು ಮದುವೆ, ಸೀಮಂತ, ನಾಮಕರಣದವರೆಗಿನ ಅನೇಕ ಹಂತಗಳಲ್ಲಿ ಗುರುತಿಸಬಹುದು. ಕಂಬಳಿಯ ಜೊತೆಗಿನ ಒಟ್ಟು ಸಂಪ್ರದಾಯ-ಆಚರಣೆಗಳನ್ನು ಅಭ್ಯಾಸದ ಅನುಕೂಲಕ್ಕಾಗಿ

೧. ಶುಭಕಾರ್ಯ ಸಂಬಂಧಿ

೨. ವ್ಯವಸಾಯ ಸಂಬಂಧಿ

೩. ಜಾಡಿಯ ವಿಶೇಷತೆ

೪. ಕಂಥೆ ಸೇವೆ

೫. ಕೆಲವು ವಿಶೇಷ ಸಂದರ್ಭಗಳು

ಎಂದು ಐದು ವಿಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಈ ವಿಭಾಗಗಳನ್ನು ಒಂದೊಂದಾಗಿ ವಿಸ್ತೃತವಾಗಿ ಈ ಮುಂದೆ ವಿವರಿಸಲಾಗಿದೆ.

### ೧. ಶುಭಕಾರ್ಯ ಸಂಬಂಧಿ

ಈ ವಿಭಾಗದಲ್ಲಿ ಕಂಬಳಿ ಬಳಸಲ್ಪಡುವ ಶುಭ ಸಂದರ್ಭಗಳನ್ನು ಮಾತ್ರ ಅಧ್ಯಯನಕ್ಕೆ ಆರಿಸಿ ಕೊಳ್ಳಲಾಗಿದೆ. ಕಂಬಳಿಯ ಭೌತಿಕ ಸ್ವರೂಪದ ಸುತ್ತ ಜನಪದರು ಎಷ್ಟೇ ವಿಧಿ-ನಿಷೇಧಗಳನ್ನು ಕಟ್ಟಿ ಕೊಂಡಿದ್ದರೂ ಅವರ ಭಾವನಾ ಪ್ರಪಂಚದಲ್ಲಿ ಅದಕ್ಕೆ ತನ್ನದೇ ಆದ ಮುಕ್ತತೆಯಿದೆ. ಅಂದರೆ ಕಾರ್ಯಗಳಲ್ಲಿ ಬಳಸುವ ಕಂಬಳಿ ತಮ್ಮ ಮನೆಯದೇ ಆಗಿರಬೇಕೆಂಬ ಯಾವುದೇ ನಿರ್ಬಂಧವಿಲ್ಲ. ತಮ್ಮ ಮನೆಯಲ್ಲಿ ಇರದಿದ್ದರೂ ಇನ್ನೊಬ್ಬರ ಮನೆಯಿಂದಾದರೂ ಕಡ್ಡಾಯವಾಗಿ ಕಂಬಳಿಯನ್ನು ತಂದೇ ಕಾರ್ಯ ಮಾಡಬೇಕೆನ್ನುವ ಕಟ್ಟುಪಾಡಿನಿಂದಲೇ ಕಂಬಳಿಗೆ ಬಂಧ ಮುಕ್ತತೆ ದೊರೆತಿದೆ. ಕಂಬಳಿ ಯಾವುದೇ ಭೇದಭಾವವಿಲ್ಲದೇ ಎಲ್ಲರೊಂದಿಗೂ ಒಂದಾಗಿ ಬೆರೆಯುವುದೇ ಅದರ ವಿಶೇಷತೆ.

**ಕನ್ಯೆ ನೋಡುವುದು :** ಮಗಳಿಗೆ ಮದುವೆ ಮಾಡಬೇಕೆಂಬ ಯೋಚನೆಯ ನಂತರದ ಹಂತದಲ್ಲಿ ಅದನ್ನು ಕಾರ್ಯರೂಪಕ್ಕೆ ತರುವಲ್ಲಿ ಕೈಕೊಳ್ಳುವ ಮೊದಲ ಕಾರ್ಯವೇ ಕನ್ಯೆ ನೋಡುವದು. ಕನ್ಯೆ ನೋಡಲು ಹೋದ ವರನ ಕಡೆಯವರನ್ನು ಕನ್ಯೆಯ ಮನೆಯ ಪಡಸಾಲೆಯಲ್ಲಿ ಅವರಿಗಾಗಿಯೇ ಹಾಸಿದ ಜಮಖಾನೆಯ ಮೇಲೆ ಕುಳ್ಳಿರಿಸಲಾಗುತ್ತದೆ. ಜಮಖಾನೆಯ ಒಂದು ಭಾಗದಲ್ಲೋ ಜಾಗವಿದ್ದರೆ ಪ್ರತ್ಯೇಕವಾಗಿ ಕನ್ಯೆಗಾಗಿ ಕಂಬಳಿ ಹಾಸಲಾಗುತ್ತದೆ. ಹೀಗೆ ಹಾಸುವಾಗ ಕನ್ಯೆಯ ತಲೆಯ ಮೇಲೆ ಜಂತಿಯ ತೊಲೆ ಬರಲಾರದಂತೆ ನೋಡಿಕೊಳ್ಳಲಾಗುತ್ತದೆ. ತರುವಾಯ ಅವರು ಕುಳಿತಲ್ಲಿಗೆ ಕನ್ಯೆಯನ್ನು ಕರೆತರಲಾಗುತ್ತದೆ. ಅವಳು ಕುಳಿತುಕೊಳ್ಳಲೆಂದು ಹಾಸಿದ ಕಂಬಳಿಯ ಮೇಲೆ ಕೆಲವೊಂದು ಕಡೆಗೆ ಚೌಕಿಮಣೆಯನ್ನು ಹಾಕಿ ಅದರ ಮೇಲೆ ಸಾಲಂಕೃತಳಾದ ಕನ್ಯೆಯನ್ನು ಕೂಡಿಸುವರು. ಈಗ ಆಧುನಿಕತೆಯ ಗಾಳಿಸೋಕಿ ಕನ್ಯೆಯನ್ನು ಕುರ್ಚಿಯ ಮೇಲೋ, ಮಣೆಯ ಮೇಲೋ ಕೂಡ್ರಿಸುವದುಂಟು. ಇದೇ ರೀತಿ ಕೆಲವು ಕಡೆಗೆ ಮುಂಚೆ ರೂಢಿಯಲ್ಲಿದ್ದಂತೆ ಕಂಬಳಿಯನ್ನು ಹಾಸಿ ಅದರ ಮೇಲೆ ಕನ್ಯೆಯನ್ನು ಕೂಡ್ರಿಸಿ ಕನ್ಯೆ ತೋರಿಸುವ ಪದ್ಧತಿ ಉಳಿದಿದೆ. ನಂತರ ವರನ ಕಡೆಯವರು ತಂದ ಹಣ್ಣು ಹೂವುಗಳಿಂದ ಉಡಿ ತುಂಬಿ ಕನ್ಯೆಯನ್ನು ಮಾತನಾಡಿಸುತ್ತ ಅವಳ ಲಕ್ಷಣಗಳನ್ನು ಗಮನಿಸಿ, ಹಸ್ತ ಸಾಮುದ್ರಿಕೆಯ ಮಾಹಿತಿ ಇದ್ದವರು ಅವಳ ಎಡಗೈಯಲ್ಲಿಯ ರೇಖೆಗಳನ್ನು ಗಮನಿಸುವುದು ಈ ಮುಂತಾದ ವಿಧಿವಿಧಾನಗಳೆಲ್ಲ ನಡೆಯುತ್ತವೆ.

**ಮಾತುಕತೆ :** ನೋಡಲು ಹೋದ ಕನ್ಯೆ ಮನಸ್ಸಿಗೆ ಬಂದ ಮೇಲೆ ಮಾತುಕತೆಯ ದಿನ ನಿಗದಿಯಾಗುತ್ತದೆ. ಇದನ್ನು ವರನ ಅಥವಾ ವಧುವಿನ ಯಾರ ಮನೆಯಲ್ಲಾದರೂ ಅನುಕೂಲಕ್ಕೆ ತಕ್ಕಂತೆ ನಡೆಸಲಾಗುತ್ತದೆ. ಇಲ್ಲಿಯೂ ಕಂಬಳಿಯ ಪಾತ್ರ ಇದ್ದೇ ಇದೆ. ವಧುವರರ ಕಡೆಯ ಹಿರಿಯರು ಈ ಸಂಬಂಧವನ್ನು ಪರಸ್ಪರ ಒಪ್ಪಿಕೊಂಡ ಮೇಲೆ ಆ ಸಂಬಂಧದ ಒಪ್ಪಂದ ಪತ್ರಗಳನ್ನು ದ್ವಿಪ್ರತಿಯಲ್ಲಿ ಬರೆಯಲಾಗುತ್ತದೆ. ಹೀಗೆ ಬರೆದ ಕಾಗದಗಳನ್ನು ಪೂಜಿಸಲಾಗುತ್ತದೆ. ಪೂಜಿಸುವ ಈ ಕಾಗದಗಳನ್ನು ಶ್ಯಾಸಕ್ಕಿ ಹೊಯ್ದು ಕಂಬಳಿಯ ಮೇಲೆ ಇಟ್ಟು ಪೂಜಿಸಿ ಆರತಿ ಮುಂತಾಗಿ ಪೂಜಾ ಸಾಮಗ್ರಿಗಳನ್ನು ಇರಿಸಿ ವಿಧಿ ವಿಧಾನಗಳನ್ನು ನೆರವೇರಿಸ ಲಾಗುತ್ತದೆ.

**ನಿಶ್ಚಯ ಕಾರಣ :** ಮಾತುಕತೆಯ ನಂತರ ಅನುಕೂಲವಾದಾಗ ಅಥವಾ ಮದುವೆಯ ಹಿಂದಿನ ದಿನ ಈ ನಿಶ್ಚಯ ಕಾರಣ ಹೆಚ್ಚಾಗಿ ವಧುವಿನ ಮನೆಯಲ್ಲಿ ಜರುಗುತ್ತದೆ. ಈ ಕಾರಣಕ್ಕೆ ಇಬ್ಬರ ಕಡೆಯ ಆತ್ಮೀಯರೆಲ್ಲ ಮನೆಯ ಪಡಸಾಲೆಯಲ್ಲಿ ಸೇರುತ್ತಾರೆ. ಅಲ್ಲಿಯೇ ಒಂದು ಕಡೆಗೆ ಕಂಬಳಿ ಹಾಸಿ ಮೇಲೆ ಧಾನ್ಯದ ಹಸೆ ಹೊಯ್ಯುವರು. ಕಂಬಳಿಯ ಒಂದು ಬದಿಯಲ್ಲಿ ಕನ್ಯೆಗಾಗಿ ಉಡಿತುಂಬುವ ಸಾಮಾನುಗಳನ್ನು ಜೊತೆಗೆ ಎರಡು ತೆಂಗಿನಕಾಯಿ, ಸಕ್ಕರೆ, ಬಾಳೆಹಣ್ಣು, ನಿಂಬೆಹಣ್ಣು ಮತ್ತು ಹಸಿರು ಸೀರೆ-ಕುಪ್ಪಸಗಳೆಲ್ಲವನ್ನೂ ಒಂದು ತಟ್ಟೆಯಲ್ಲಿ ಹಾಕಿ ಇಡುವರು. ನಂತರ ಈ ಎಲ್ಲ ಸಾಮಾನುಗಳು ಕಂಬಳಿಯ ಮೇಲಿರುವಂತೆಯೇ ಗಂಧ, ಕುಂಕುಮಾಕ್ಷತೆಗಳಿಂದ ವಿಘ್ನೇಶ್ವರನ ಜೊತೆಗೆ ಪೂಜಿಸುತ್ತಾರೆ. ನಂತರ ಹಸೆಹೊಯ್ದು ಈ ಕಂಬಳಿಯ

ಮೇಲೆ ಕನ್ಯೆ ಬಂದು ಅವಳಿಗೆ ನಿಶ್ಚಯದ ಸೀರೆ ಕೊಟ್ಟನಂತರ ಆ ಸೀರೆಯುಟ್ಟು ಮತ್ತೊಮ್ಮೆ ಬಲಗಾಲಿಟ್ಟು ಆ ಕಂಬಳಿಯನ್ನು ಪ್ರವೇಶಿಸಿ ಕುಳಿತುಕೊಳ್ಳುವಳು. ಆಮೇಲೆ ಅವಳಿಗೆ ಉಡಿತುಂಬಿ ಕೈಯಲ್ಲಿ ಹೊಸ್ಸುಂಗರ ಹಾಕಿ ಮುತ್ತೈದೆಯರು ಆರತಿ ಮಾಡಿ ಬಾಯಲ್ಲಿ ಸಕ್ಕರೆ ಹಾಕುವರು. ಇಷ್ಟಾದರೆ ಈ ಸಂಬಂಧ ಅಧಿಕೃತವಾಗಿ ಸಾಮಾಜಿಕ ಮನ್ನಣೆಯನ್ನು ಪಡೆದಂತೆ.

**ಜವಳಿ ಪೂಜೆ :** ಮದುವೆ ನಿಶ್ಚಯವಾದ ಮೇಲೆ ಮದುವೆಯವರೆಗೆ ಅನೇಕ ಆಚರಣೆಗಳು ಜರುಗುತ್ತವೆ. ಅಲ್ಲದೇ ಮದುವೆಗಾಗಿ ಅನೇಕ ತರಹದ ಖರೀದಿಗಳು, ಪೂಜೆಗಳು ನಡೆಯುತ್ತವೆ. ಅವುಗಳಲ್ಲಿ ಈ ಜವಳಿ ಪೂಜೆಯೂ ಒಂದು. ಪೂಜೆಯನ್ನು ನೆರವೇರಿಸಿ ಕೊಡಲು ಬಂದ ಸ್ವಾಮಿಗಳು ಪಡಸಾಲೆಯಲ್ಲಿ ಅಥವಾ ದೇವರ ಕೋಣೆಯಲ್ಲಿ ಕಂಬಳಿಯನ್ನು ಹಾಸಿ ಅದರ ಮೇಲೆ ಸಾಲಾಗಿ ಮೂರು ಅಕ್ಕಿ ಗುಂಪಿಗಳನ್ನು ಹಾಕಿ ಕಲಶಗಳನ್ನು ಸ್ಥಾಪಿಸುತ್ತಾರೆ. ಮಧ್ಯದ ಕಲಶಕ್ಕೆ ಒಂದು ತಂಬಿಗೆ ನೀರಿಟ್ಟು ಅದರ ಮೇಲೆ ತೆಂಗಿನಕಾಯಿ ಇಟ್ಟಿದ್ದು ವರುಣದೇವನನ್ನು ಪ್ರತಿನಿಧಿಸುತ್ತದೆ. ಪಕ್ಕದ ಎರಡೂ ಅಕ್ಕಿಗುಂಪಿಯ ಮೇಲೆ ಬರೀ ತೆಂಗಿನಕಾಯಿ ಗಳನ್ನು ಇಡುವುದರ ಮೂಲಕ ಸ್ಥಾಪಿತವಾಗಿದ್ದು ಒಂದು ಪಾರ್ವತಿ, ಇನ್ನೊಂದು ವಿಘ್ನೇಶ್ವರನನ್ನು ಸಂಕೇತಿಸುತ್ತದೆ.[೩] ಈ ಪೂಜೆ ಮುಂದೆ ನಡೆಯುವ ಮದುವೆ ಸಮಾರಂಭಕ್ಕೆ ದೇವರುಗಳನ್ನೆಲ್ಲ ಆಹ್ವಾನಿಸಿ ಅವರ ಆಶೀರ್ವಾದ ಸದಾಕಾಲ ಈ ವಧೂವರರ ಮೇಲಿರುವಂತೆ ಕೋರುವ ಪರಿಯಾಗಿದೆ. ಹೀಗೆ ಸ್ಥಾಪಿಸಿದ ಕಲಶಗಳನ್ನು ಕುಂಕುಮ, ಚಂದನ, ಗಂಧಾಕ್ಷತೆಗಳಿಂದ ಸಿಂಗರಿಸಿ ಪೂಜಿಸುತ್ತಾರೆ. ಸ್ಥಾಪಿಸಿದ ಈ ಕಲಶಗಳ ಎದುರಲ್ಲಿ ಕಂಬಳಿಯ ಉಳಿದ ಇನ್ನರ್ಧ ಭಾಗದಲ್ಲಿ ಹಸೆಹೊಯ್ದು ಮದುವೆಗಾಗಿ ತಂದಿರಿಸಿದ 'ಜವಳಿ ಗಂಟ' (ಮದುವೆಗಾಗಿ ಖರೀದಿಸಿದ ವಧುವರರ ಬಟ್ಟೆಗಳನ್ನು ಬಿಳಿ ಅರಿವೆಗಳಲ್ಲಿ ಗಂಟುಕಟ್ಟಿರುವುದು)ನ್ನು ಅದರ ಮೇಲೆ ತಂದಿರಿಸಲಾಗುತ್ತದೆ. ಇದಕ್ಕೂ ಹೂ ಪತ್ರಿಗಳಿಂದ ಅಲಂಕರಿಸಿ ಅಕ್ಷತೆ ಹಾಕಿ ಕರ್ಪೂರ ಬೆಳಗುತ್ತಾರೆ. ಪೂಜೆಯಾದ ಮೇಲೆ ಕಂಬಳಿಯ ಮೇಲಿದ್ದ ಜವಳಿಗಂಟನ್ನು ಒಯ್ದು ದೇವರ ಮನೆಯಲ್ಲಿಡುವರು.

ಕಂಬಳಿ ಪೀಠದ ಮೇಲೆ ನಡೆಯುವ ಪ್ರಸ್ತುತ ಜವಳಿಪೂಜೆಯಲ್ಲಿ ಜನಪದರು ಕಲಶಗಳ ರೂಪದಲ್ಲಿ ಆಹ್ವಾನಿಸಲ್ಪಡುವ ಪಾರ್ವತಿ, ವರುಣದೇವ, ವಿಘ್ನೇಶ್ವರರಿಗೂ ಆಸನರೂಪದಲ್ಲಿ ಕಂಬಳಿಯನ್ನು ಪರಿಗಣಿಸುತ್ತಾರೆಂದರೆ ಕಂಬಳಿಯ ಬಗೆಗಿರುವ ಅವರ ಭಕ್ತಿ ಎಂಥದೆಂಬುದನ್ನು ಪ್ರಕಟಗೊಳಿಸುತ್ತದೆ.

**ಲಗ್ನದಕ್ಕಿಗಂಟು ಕಟ್ಟುವದು:** ಮದುವೆಗೆ ಬೇಕಾದ ಧಾನ್ಯಗಳನ್ನು ಶಾಸ್ತ್ರರೂಪದಲ್ಲಿ ಕಟ್ಟುವುದೇ ಲಗ್ನದಕ್ಕಿ ಗಂಟು ಕಟ್ಟುವದು. ಈ ಲಗ್ನದಕ್ಕಿಗಂಟು ಕಟ್ಟಲು ನಿಶ್ಚಯ ಕಾರಣವಾಗಿರಲೇಬೇಕೆಂಬ ಮೊದಲಿದ್ದ ಸಂಪ್ರದಾಯ ಈಗ ಸಡಿಲುಗೊಂಡಿದೆ. ಈಗಾಗಲೇ ಜವಳಿ ಪೂಜೆಗೆ ಹಾಸಿದ ಕಂಬಳಿಯ ಮೇಲೆಯೇ ಲಗ್ನದಕ್ಕಿಗಂಟು ಕಟ್ಟುವ ಕಾರ್ಯವೂ ಜರುಗುತ್ತದೆ. ಈ ಕಾರ್ಯ ವರನ ಮನೆಯಲ್ಲಿಯೇ ನಡೆಯುತ್ತದೆ. ಕಂಬಳಿಯ ಮೇಲೆ ಈ ಗಂಟುಗಳನ್ನು ಎರಡು ಭಾಗವಾಗಿ ಕಟ್ಟುವರು. ಒಂದು ಲಗ್ನದಕ್ಕಿಗಂಟು, ಎರಡು ಉಡಿಯಕ್ಕಿ

ಗಂಟು. ಹಸೆಹೊಯ್ದು ಹಾಸಿದ ಕರಿ ಕಂಬಳಿಯ ಮೇಲೆ ಸುಮಾರು ಎರಡು ಅಡಿ ಚಚ್ಚೌಕಾಕಾರದ ಎರಡು ಬಿಳಿಬಟ್ಟೆಗಳನ್ನು ಹಾಸಿ, ಆ ಬಟ್ಟೆಯ ನಾಲ್ಕು ಮೂಲೆಗಳನ್ನು ನಾಲ್ಕು ಜನ ಮುತ್ತೈದೆಯರು ಹಿಡಿದಿದ್ದು ಮತ್ತೊಬ್ಬ ಮುತ್ತೈದೆ ಆ ಅರಿವೆಗೆ ಅಕ್ಕಿ ಅಳೆದು ಹಾಕುತ್ತಾಳೆ. ಸಾಮಾನ್ಯವಾಗಿ ಉಡಿಯಕ್ಕಿಗಂಟಿಗೆ ಹಾಕಿದ ಎರಡರಷ್ಟು ಅಕ್ಕಿಯನ್ನು ದೊಡ್ಡ ಲಗ್ನದಕ್ಕಿಗಂಟಿಗೆ ಹಾಕುತ್ತಾರೆ. ಈ ಎರಡೂ ಗಂಟುಗಳನ್ನು ಮುತ್ತೈದೆಯರೇ ಕಟ್ಟುವರು. ಈ ಮೊದಲೇ ಚೌಕಾಕಾರದ ಬಿಳಿಬಟ್ಟೆಗಳಲ್ಲಿ ಅರಿಶಿಣದಿಂದ ಚಿತ್ರಬಿಡಿಸಿ ಗಂಟು ಕಟ್ಟಿದ ನಂತರವೂ ಮತ್ತೆ ಮೇಲೆ ಅರಿಶಿಣ ಸವರುತ್ತಾರೆ. ನಂತರ ಕಟ್ಟಿದ ಈ ಅಕ್ಕಿಗಂಟುಗಳನ್ನು ಕಂಬಳಿಯ ಮೇಲಿರುವಂತೆಯೇ ಪೂಜೆಮಾಡಿ ಮುತ್ತೈದೆಯರು ಆರತಿ ಮಾಡಿದ ನಂತರವಷ್ಟೇ ಕಂಬಳಿಯ ಮೇಲಿಂದ ಗಂಟುಗಳನ್ನು ಎತ್ತಿಡುವರು. ಅಲ್ಲಿಯವರೆಗೂ ಕಂಬಳಿ ಪೂಜೆಯ ಪವಿತ್ರ ಸ್ಥಾನವಾಗಿ ಈ ಎಲ್ಲ ಕಾರ್ಯಗಳಿಗೆ ಸಾಕ್ಷೀಭೂತವಾಗುತ್ತದೆ.

**ಎದುರುಗೊಳ್ಳುವದು:** ಮದುವೆಗಾಗಿ ಬಂದ ಬೀಗರನ್ನು ಸಾಂಪ್ರದಾಯಿಕವಾಗಿ ಬರಮಾಡಿಕೊಳ್ಳುವುದೇ ಎದುರುಗೊಳ್ಳುವ ಕಾರ್ಯ. ಮದುವೆ ಎಲ್ಲಿರುವುದೋ ಆ ಊರ ಅಗಸಿಯಲ್ಲಿಯೇ ಈ ಕಾರ್ಯ ನಡೆಯುತ್ತದೆ.

ಹತ್ತsರೂಪಾಯಿ ಕೊಟ್ಟs ಮತ್ತ ಕಂಬಳಿ ನೇಸಿ<br>
ಉತ್ತsರ ಹೊಳಿಯಾಗ ಒಗಸೀವ| ಕಂಬಳಿ<br>
ಹಾಸsರೇ ನಮ್ಮೂರ ಅಗಸ್ಯಾಗ ||[೮]

ಎನ್ನುವ ತ್ರಿಪದಿ ಎದುರುಗೊಳ್ಳುವ ಕಾರ್ಯಕ್ಕೆ ಕಡ್ಡಾಯವಾಗಿ ಕಂಬಳಿ ಬೇಕು ಎನ್ನುವುದನ್ನು ಹೇಳುತ್ತದೆ. ಹೀಗೆ ಕಂಬಳಿಯನ್ನು ಅಗಸಿಯಲ್ಲಿ ಹಾಸಿ ವಧುವರರಿಬ್ಬರ ಕಡೆಯ ಒಬ್ಬೊಬ್ಬರು ಅದರ ಮೇಲೆ ಕೂಡುವರು. ಹೆಚ್ಚಾಗಿ ಕಂಬಳಿಯ ಮೇಲೆ ಎರಡೂ ಕಡೆಯ ಅಯ್ಯನವರನ್ನು ಕುಳ್ಳಿರಿಸಿ ಪಾದ ತೊಳೆದು ವಿಭೂತಿ ಕುಂಕುಮ ಹಚ್ಚಿ ಊದಿನಕಡ್ಡಿ ಬೆಳಗಿ ಪರಸ್ಪರ ಬಾಯಲ್ಲಿ ಸಕ್ಕರೆ ಹಾಕಿ ಎಲೆ ಅಡಿಕೆಯ ವೀಳ್ಯ ಕೊಟ್ಟು ಜೊತೆಗೆ ತೆಂಗಿನಕಾಯಿ, ದಕ್ಷಿಣೆಯನ್ನೂ ಕೊಡುವರು. ಇಷ್ಟಾದ ಮೇಲೆಯೇ ಬಂದ ಬೀಗರನ್ನು ಬಾಜಾ ಭಜಂತ್ರಿಗಳ ಮೆರವಣಿಗೆಯೊಂದಿಗೆ ಆದರದಿಂದ ಮೊದಲೇ ನಿಯಮಿಸಿದ ಸ್ಥಳಕ್ಕೆ ಕರೆದೊಯ್ಯಲಾಗುತ್ತದೆ.

**ಐರಾಣಿ ತರುವದು:** ಮದುವೆ ಸಮಯದಲ್ಲಿ ಸುರಗಿ ಸುತ್ತಲು ಕುಂಬಾರನ ಮನೆಯಿಂದ ಮಣ್ಣಿನ ಮಗಿಗಳನ್ನು ಮೆರವಣಿಗೆಯಲ್ಲಿ ತರುವುದೇ ಐರಾಣಿ ತರುವದು. ಐರಾಣಿ ಒಯ್ಯುವ ಮೊದಲು ಕುಂಬಾರನ ಮನೆಯಲ್ಲಿ ಈ ಮಗಿಗಳನ್ನು ಪೂಜಿಸಲು ಕಂಬಳಿ ಅವಶ್ಯ. ಕುಂಬಾರನ ಮನೆಯಲ್ಲಿ ಕಂಬಳಿ ಹಾಸಿ 'ನಿಧಿ' (ಜೋಳ) ಹೊಯ್ದು ಅದರ ಮೇಲೆ ನಾಲ್ಕು ಮಗಿ, ಒಂದು ಸ್ವಾಳಿ, ಒಂದು ಬಿಂದಿಗೆ, ಎರಡು ಮುಚ್ಚಳಗಳನ್ನಿಟ್ಟು ವಿಭೂತಿ-ಕುಂಕುಮ ಹಚ್ಚಿ ಊದಿನಕಡ್ಡಿ ಬೆಳಗಿ ಪೂಜಿಸುವರು. ಪೂಜೆಯ ನಂತರ ಐರಾಣಿ ಮಾಡಿದ ಕುಂಬಾರನಿಗೆ ಉಲುಪಿ ಕೊಟ್ಟ ಮೇಲೆಯೇ ಮದುವೆ ಮನೆಯಿಂದ ಬಂದ ಏಳೆಂಟು

ಜೋಡಿ ಗಂಡ-ಹೆಂಡತಿಯರು ಕಂಬಳಿಯ ಮೇಲಿರುವ ಸಾಮಾನುಗಳನ್ನು ತೆಗೆದುಕೊಂಡು, ಮೆರವಣಿಗೆಯಲ್ಲಿ ಮದುವೆ ಮನೆಗೆ ಹೋಗುವರು.

**ಅರಿಷಿಣ ಹಚ್ಚುವುದು:** ಅರಿಷಿಣ ಹಚ್ಚುವ ಸಂದರ್ಭದಲ್ಲಿಯೂ ಕಂಬಳಿ ಕಡ್ಡಾಯವಾಗಿ ಬಳಕೆಯಾಗುವುದನ್ನು ಕಾಣುತ್ತೇವೆ. ಈ ಸಂದರ್ಭದಲ್ಲಿ ಕಂಬಳಿ ಹಾಸಿ ಅದರ ಮೇಲೆ ಜೋಳದ ಹಸೆಯನ್ನು ಹೊಯ್ಯುವರು. ಮದುವೆ ಸಂದರ್ಭದಲ್ಲಾಗಲೀ ಅಥವಾ ಬೇರೆ ಶುಭಕಾರ್ಯಗಳಲ್ಲಾಗಲೀ ಸಾಮಾನ್ಯವಾಗಿ ಅಕ್ಕಿಹಸೆಯನ್ನೇ ಹೊಯ್ಯುವರು. ಆದರೆ ಈ ಅರಿಷಿಣ ಹಚ್ಚುವ ಸಂದರ್ಭದಲ್ಲಿ ಮಾತ್ರ ಕಂಬಳಿಯ ಮೇಲೆ ಜೋಳದ ಹಸೆಯನ್ನು ಹೊಯ್ಯುವುದು ವಿಶೇಷ. ಹೀಗೆ ಹಸೆ ಹೊಯ್ದು ಕಂಬಳಿಯ ಎದುರಲ್ಲಿ ಅಡ್ಡುಣಗಿಯ ಮೇಲೆ ಆರತಿಯನ್ನಿಡುವರು. ಇದನ್ನೇ ತ್ರಿಪದಿಯೊಂದರಲ್ಲಿ

ರತ್ನಗಂಬಳಿ ಮ್ಯಾಲ ಮುತ್ತಿನ ಹಾಸಿ ಹೊಯ್ದು
ಚಿತ್ತಾರದ ಚೌಕ ಬರದ | ಹಾಸಿ
ನೀಲ ದಾರತಿಯನಿಡತಾರ ||

ಎಂದು ಹೇಳುವರು. ವಧುವರರು ಇದರ ಮೇಲೆ ಕುಳಿತ ನಂತರ ಇಬ್ಬರ ಕಡೆಯ ಮುತ್ತೈದೆಯರು ಅರಿಷಿಣ ಹಚ್ಚಿ, ಅದೇ ಕಂಬಳಿಯ ಮೇಲೆ ಎಣ್ಣೆ ನೈನೇರಿಸುವುದನ್ನು ಮಾಡುವರು.

**ಗುಗ್ಗಳ:** ಮನೆದೇವರಾದ ವೀರಭದ್ರನ ಸಾಂಪ್ರದಾಯಿಕ ಪೂಜೆಯೇ ಗುಗ್ಗಳ. ಈ ಗುಗ್ಗಳ ಶಾಸ್ತ್ರವನ್ನು ಗೊಡಚಿ ವೀರಭದ್ರ, ಹೊಳೆಬಸವೇಶ್ವರ, ಮಲ್ಲಿಕಾರ್ಜುನ ದೇವರುಗಳ ಮನೆದೇವರಿದ್ದವರು ಅಲ್ಲದೇ ಮನೆಯಲ್ಲಿ ಮುಂಚಿನಿಂದಲೂ ಗುಗ್ಗಳ ಸಂಪ್ರದಾಯವಿದ್ದವರು ಮಾತ್ರ ಗುಗ್ಗಳ ಎಬ್ಬಿಸುವರು. ಗುಗ್ಗಳ ಕಾರ್ಯಕ್ಕೆ ಮುಖ್ಯವಾಗಿ ಮಣ್ಣಿನ ಗಡಿಗೆಗಳು ಬೇಕು. ಮೊದಲೇ ಹೇಳಿಟ್ಟ ಕುಂಬಾರನ ಮನೆಗೆ ಗುಗ್ಗಳ ಕೊಡತರಲು ಮೆರವಣಿಗೆಯಲ್ಲಿ ಹೊರಡುವರು. ಕುಂಬಾರನ ಮನೆಯಲ್ಲಿಯೇ ಮೊದಲು ಈ ಗಡಿಗೆಗಳ ಪೂಜೆಯಾಗುತ್ತದೆ. ಕರಿಕಟ್ಟದ ಕಂಬಳಿಯನ್ನು ಹಾಸಿ ಅದರ ಮೇಲೆ ನಿಧಿ ಹಾಕುವರು. ನಿಧಿಯ ಮೇಲೆ ನಾಲ್ಕು ಮೂಲೆಗೆ ಒಂದೊಂದು ಕೊಡಗಳನ್ನಿಟ್ಟು ಎರಡು ಮುಚ್ಚಳಗಳನ್ನಿಡುವರು. ಆ ಕೊಡಗಳಿಗೆ ಮೂರು ಬೊಟ್ಟು ವಿಭೂತಿ, ಕುಂಕುಮ ಹಚ್ಚಿ ಊದಿನಕಡ್ಡಿ ಬೆಳಗಿ ನೈವೇದ್ಯ ಹಿಡಿದು ಕಾಯಿ ಒಡೆಯುವರು.[೫] ಹೀಗೆ ಪೂಜೆಯಾದ ನಂತರ ಕುಂಬಾರನಿಗೆ ಚಾಜಕೊಟ್ಟು ಅಲ್ಲಿಂದ ಮೆರವಣಿಗೆಯಲ್ಲಿ ಈ ಗುಗ್ಗಳ ಕೊಡಗಳನ್ನು ತರುವರು.

ಈ ಗುಗ್ಗಳ ಕಾರ್ಯ ಪ್ರಾರಂಭವಾಗುವುದಕ್ಕೂ ಮೊದಲು ಮನೆಯ ದೇವರ ಕೋಣೆ ಅಥವಾ ಪಡಸಾಲೆಯಲ್ಲಿ ಕಂಬಳಿ ಹಾಸಿ ಅದರ ಮೇಲೆ ಹೊಸದಾದ ಮಂಜರ ಪಾಟ ಬಟ್ಟೆ ಹಾಸಿ ಮೇಲೆ ಅಕ್ಕಿಗುಂಪಿ ಅಥವಾ ಅಕ್ಕಿ ಹಸೆ ಹೊಯ್ಯುವರು. ಮುತ್ತೈದೆಯರು ಆಗತಾನೇ ಮಡಿಯಿಂದ ಮಾಡಿದ ತರಗ, ಕರ್ಚಿಕಾಯಿ,

ಹಿಟ್ಟಿನಿಂದ ಮಾಡಿದ ಈಶ್ವರ, ಜಡೆ, ಗಂಟೆಗಳಲ್ಲದೇ ಉತ್ತತ್ತಿ, ಅರಿಷಿಣ ಬೇರು, ಕೊಬ್ಬರಿ ಬಟ್ಟಲು, ಲಿಂಬೆಹಣ್ಣು ಮುಂತಾದವುಗಳನ್ನು ತಳ ಕಡಿದು ಸಿದ್ಧಪಡಿಸಿದ ಬೋರಲಾದ ಅರ್ಧಕೊಡಕ್ಕೆ ಕಟ್ಟಿ ಸಿಂಗರಿಸಿದ ಗುಗ್ಗಳ ಕೊಡವನ್ನು ಹಸೆ ಹೊಯ್ದು ಕಂಬಳಿಯ ಮೇಲಿಡುವರು. ಅದರ ಮುಂದೆ ಒಂದು ತಟ್ಟೆಯಲ್ಲಿ ಮಡಿಯಿಂದ ಮಾಡಿದ ಐದು ಸಜ್ಜಕದ ಹೋಳಿಗೆಗಳನ್ನಿಟ್ಟು ಜೊತೆಯಲ್ಲಿಯೇ ಅಡ್ಡುಣಗೆಯ ಮೇಲೆ ಆರತಿ ಹಚ್ಚಿ ಇಡುವರು. ನಂತರ ಮಂಗಳಾರತಿ ಮಂತ್ರದೊಂದಿಗೆ ಪುರವಂತರು ತಾವೇ ತಂದ ಹಿಲಾಲ ಅಥವಾ ಹಚ್ಚಿಟ್ಟ ಆರತಿ ದೀಪಕ್ಕೆ ಕರ್ಪೂರದಿಂದ ಗುಗ್ಗಳ ಕೊಡಗಳಿಗೆ ಅಗ್ನಿಸ್ಪಿಕೆ ಹಚ್ಚುವರು. ಮಂಗಳಾರತಿಯಾದ ಮೇಲೆ ಪುರವಂತರು ಅದೇ ಸ್ಥಳದಲ್ಲಿಯೇ ಒಡಬು ಹೇಳುತ್ತಿರುವಂತೆ ಪೂರ್ತಿ ಒದ್ದೆಯಾಗಿ ಮಡಿಯಲ್ಲಿದ್ದವರು ಕಂಬಳಿ ಮೇಲಿನ ಗುಗ್ಗಳ ಕೊಡಗಳನ್ನು ತೆಗೆದುಕೊಂಡು ಹೊತ್ತು ತಲೆಬಾಗಿಲವರೆಗೆ ಬರುತ್ತಾರೆ. ಹಾಗೆ ಬಂದಾಗ ಅಲ್ಲಿ ಮತ್ತೆ ಕಂಬಳಿ ಹಾಸಿ ಗುಗ್ಗಳ ಕೊಡಗಳನ್ನಿಡುತ್ತಾರೆ ಅಥವಾ ಕೊಡ ಹೊತ್ತವರು ತಮ್ಮ ಮಂಡೆಯ ಮೇಲೆ ಕೊಡ ಇಟ್ಟುಕೊಂಡು ವೀರಾಸನದಲ್ಲಿ ಕಂಬಳಿ ಮೇಲೆ ಕುಳಿತುಕೊಳ್ಳುವರು. ಅಲ್ಲಿಯೇ ಎಲ್ಲ ಪುರವಂತರೂ ಸುಮಾರು ಹೊತ್ತು ಒಡಬು ಹೇಳುವರು.

ಗುಗ್ಗಳ ಕಾರ್ಯದಲ್ಲಿ ಪ್ರಾರಂಭದಿಂದ ಮುಕ್ತಾಯದವರೆಗೆ ಒಬ್ಬರಿಗೇ ಗುಗ್ಗಳ ಕೊಡ ಹೊರಲಾಗು ವುದಿಲ್ಲವಾದ್ದರಿಂದ ರಿಲೇ ಆಟದ ರೀತಿಯಲ್ಲಿ ಒಬ್ಬರಿಂದೊಬ್ಬರಿಗೆ ಕೊಡವನ್ನು ಹಸ್ತಾಂತರಿಸಲಾಗುತ್ತದೆ. ಹೀಗೆ ಹಸ್ತಾಂತರಿಸಬೇಕಾದಲ್ಲಿ ರಸ್ತೆಯಲ್ಲಿಯೇ ಸ್ವಲ್ಪ ವಿಶಾಲ ಜಾಗ ನೋಡಿಕೊಂಡು ಕಂಬಳಿ ಹಾಸಿ ಅದರ ಮೇಲೆ ಕೊಡವಿಡುವರು. ಅಲ್ಲಿ ಮತ್ತೆ ಪುರವಂತರ ಒಡಬು ಪ್ರದರ್ಶನವಾಗುವುದು. ಅಲ್ಲದೇ ಕೊಡಗಳಿಗೆ ಮತ್ತೆ ಪೂಜೆ ಮಾಡಿ ಎಣ್ಣೆ ಹಾಕಿ ಕಾಯಿ ಒಡೆಯುತ್ತಾರೆ. ನಂತರ ಮಡಿಯಲ್ಲಿದ್ದ ಬೇರೊಬ್ಬರು ಆ ಕೊಡ ಎತ್ತಿಕೊಳ್ಳುವರು. ಹೀಗೆ ಮದುವೆ ಮನೆಯಿಂದ ಹೊರಟ ಗುಗ್ಗಳ ಊರಿನ ವೀರಭದ್ರೇಶ್ವರ ಗುಡಿಯವರೆಗೆ ಅಥವಾ ಆ ಊರಿನ ಪ್ರಮುಖ ಗ್ರಾಮದೇವತೆಯ ದೇವಸ್ಥಾನಕ್ಕೆ ಅಥವಾ ಆ ಊರಿನಲ್ಲಿ ಗುಗ್ಗಳ ನಂದಿಸಲು (ಆರಿಸಲು) ನಿರ್ದಿಷ್ಟ ಸ್ಥಳವಿದ್ದರೆ ಆ ಸ್ಥಳದವರೆಗೆ ಬಾಜಾಬಜಂತ್ರಿ, ಸಂಬಾಳ ವಾದ್ಯಗಳೊಂದಿಗೆ ಒಯ್ದು ಅಲ್ಲಿ ಕೊಡ ಇಡುವರು. ಅಲ್ಲೇ ಒಂದು ಕಡೆಗೆ ಕಂಬಳಿ ಹಾಸಿ ಮದುಮಗನ ತಂದೆ-ತಾಯಿಗಳಿಗೆ, ಗುಗ್ಗಳ ಕೊಡ ಹೊತ್ತವರಿಗೆ ಆಹೇರಿ ಮಾಡಲಾಗುತ್ತದೆ. ಅನೇಕರು ಭಾವಿಸುವಂತೆ ಗುಗ್ಗಳ ತುಂಬ ಮಡಿ ಹುಡಿಯ ಕಾರ್ಯವಾದರೂ ಕಂಬಳಿಯನ್ನು ಅತ್ಯಂತ ಪೂಜ್ಯಭಾವನೆಯಿಂದ ಇದರಲ್ಲಿ ಬಳಸುವುದನ್ನು ನೋಡಿದಾಗ ಕುರುಬರ ಕುಲದೇವರಾದ ಬೀರಪ್ಪ-ವೀರಭದ್ರ ಇಬ್ಬರೂ ಒಂದೇ ಎಂಬ ಅಭಿಪ್ರಾಯಕ್ಕೆ ಇಲ್ಲಿಯ ಆಚರಣೆಗಳ ವಿಸ್ತೃತ ಅಧ್ಯಯನದಿಂದಾಗಿ ಮತ್ತಷ್ಟು ಪುಷ್ಟಿ ದೊರೆಯಬಹುದೆನ್ನಿಸುತ್ತದೆ. ಗುಗ್ಗಳ ನಂತರ ಮದುವೆಯ ಆಚರಣೆ ಪಂಚಗಳಸದ ಸ್ಥಾಪನೆಯೆಡೆಗೆ ಮುನ್ನಡೆಯುತ್ತದೆ.

**ಪಂಚಗಳಸ ಸ್ಥಾಪನೆ:** ಗುಗ್ಗಳ ಕಾರ್ಯದ ನಂತರದಲ್ಲಿ ಕಂಬಳಿ ಬಳಕೆಗೊಳ್ಳುವ ಮತ್ತೊಂದು ಸಂದರ್ಭ ವೆಂದರೆ ಪಂಚಗಳಸ (ಗುರಸುರಗಿ) ಸ್ಥಾಪನಾಕಾರ್ಯ. ಮದುವೆ ಮನುಷ್ಯ ಬದುಕಿನ ಮಹತ್ವದ ಸಂಸ್ಕಾರ

ಗಳಲ್ಲೊಂದು. ಯಾವುದೇ ಸಂಸ್ಕಾರಗಳನ್ನು ತಮ್ಮಷ್ಟಕ್ಕೆ ತಾವು ತೆಗೆದುಕೊಳ್ಳಲಾಗುವುದಿಲ್ಲ. ಅಲ್ಲಿ ಗುರುಗಳ ಇರುವಿಕೆ ಮುಖ್ಯವಾಗುತ್ತದೆ. ಅಂತೆಯೇ ಮದುವೆಗೂ ಗುರುಸ್ವರೂಪರಾದವರ ಉಪಸ್ಥಿತಿ ಪ್ರಮುಖವಾಗುತ್ತದೆ. ವೀರಶೈವ ಧರ್ಮದಲ್ಲಿ ಆದಿ ಪಂಚಾಚಾರ್ಯರಾದ ಕಾಶಿ, ಬಾಳೇಹೊನ್ನೂರು, ಉಜ್ಜಯಿನಿ, ಕೇದಾರ, ಶ್ರೀಶೈಲ ಈ ಪೀಠಗಳಲ್ಲಿ ಸ್ಥಾಪಿತರಾದವರೇ ಆದ್ಯ ಗುರುಗಳು. ಈ ಐದೂ ಜನ ಒಂದೊಂದು ದಿಕ್ಕನ್ನು ಪ್ರತಿನಿಧಿಸುತ್ತಾರೆ. ಪೂರ್ವಕಳಸದವರು-ರೇವಣಾರಾಧ್ಯರು, ದಕ್ಷಿಣ ಕಳಸದವರು -ಮರುಳಾರಾಧ್ಯರು, ಪಶ್ಚಿಮಕಳಸದವರು -ಏಕೋರಾಮಾರಾಧ್ಯರು, ಉತ್ತರ ಕಳಸದವರು -ಪಂಡಿತಾರಾಧ್ಯರು ಮತ್ತು ಮಧ್ಯ ಕಳಸದವರು -ವಿಶ್ವಾರಾಧ್ಯರಾಗಿದ್ದಾರೆ.[೬] ಇವರನ್ನು ಸಾಂಕೇತಿಕವಾಗಿ ಕಲಶರೂಪದಲ್ಲಿ ಕಂಬಳಿಯ ಮೇಲೆ ಸ್ಥಾಪಿಸುವುದೇ ಪಂಚಗಳಸ ಸ್ಥಾಪನೆ. ಇವರಾರೂ ತಮ್ಮಷ್ಟಕ್ಕೇ ತಾವು ಸ್ವತಂತ್ರರಲ್ಲ ಎಂಬುದನ್ನು ಈ ಐದೂ ಕಲಶಗಳು ಸುತ್ತುವರಿಯುವಂತೆ ಕ್ರಮಬದ್ಧವಾದ ರೀತಿಯಲ್ಲಿ ಐದು ಸುತ್ತು ದಾರವನ್ನು ಕಂಬಳಿಯ ಮೇಲೆ ಸ್ಥಾಪಿತವಾದ ಈ ಕಲಶಗಳಿಗೆ ಸುತ್ತುವ ಗುರು ಸುರಗಿಯೇ ಹೇಳುತ್ತದೆ.

ವಿವಾಹದ ಗುರುತರವಾದ ಈ ಕಾರ್ಯಗಳು ನಡೆಯುವುದು ಕರಿಯ ಕಂಬಳಿಯ ಮೇಲೆಯೇ ಎಂಬುದನ್ನು ಗಮನಿಸಿದರೆ ಕಂಬಳಿಯ ಮಹತ್ವ ಮನದಟ್ಟಾಗುತ್ತದೆ. ಮದುವೆ ದೇವಸ್ಥಾನದಲ್ಲಾದರೆ ಗರ್ಭಗುಡಿಯ ಎದುರು ನವರಂಗದಲ್ಲಿ, ಮನೆಯಲ್ಲಾದರೆ ಮನೆಯ ವಿಶಾಲವಾದ ಪಡಸಾಲೆಯಲ್ಲಿ ಕರಿಕಂಬಳಿ ಹಾಸಿ ಅದರ ಮೇಲೆ ಒಂದೇ ರೇಖೆಯಲ್ಲಿ ಅಕ್ಕಿ ಅಥವಾ ಜೋಳದ ಮೂರು ಗುಂಪಿಗಳನ್ನು ಹಾಕುತ್ತಾರೆ. ಪಂಚಗಳಸಗಳನ್ನು ಹೂಡುವ ಮಧ್ಯದ ಗುಂಪಿ ದೊಡ್ಡದಾಗಿದ್ದು ಉಳಿದ ಎರಡೂ ದಂಡೆಯ ಗುಂಪಿಗಳು ಚಿಕ್ಕವಾಗಿದ್ದು ಒಂದರ ಮೇಲೆ ವಿಘ್ನೇಶ್ವರ, ಇನ್ನೊಂದರ ಮೇಲೆ ಪಾರ್ವತಿಯನ್ನು ಪ್ರತಿಷ್ಠಾಪಿಸಲಾಗುತ್ತದೆ. ಕಂಬಳಿಯ ಮೇಲಿರುವ ಮಧ್ಯದ ದೊಡ್ಡ ಗುಂಪಿಯ ಮೇಲೆ, ಮೇಲೆ ಹೇಳಿದ ಆಯಾ ಗುರುಗಳನ್ನು ಸಂಕೇತಿಸುವ ಕಲಶಗಳನ್ನು ಆಯಾ ದಿಕ್ಕಿಗೆ ಅನುಗುಣವಾಗಿ ಸ್ಥಾಪಿಸಲಾಗುತ್ತದೆ. ಹೀಗೆ ಸ್ಥಾಪಿಸುವ ಕಲಶಗಳು ಮುಂಚೆ ಮಣ್ಣಿನ ಮಗಿಗಳಾಗಿರುತ್ತಿದ್ದು ಈಗ ಕಾಲ ಬದಲಾದಂತೆ ಸ್ಟೀಲಿನ ತಂಬಿಗೆಯಿಂದಲೇ ಈ ಕಾರ್ಯ ನೆರವೇರಿಸುವರು. ಈ ಕಲಶಗಳ ಮೇಲೆ ವೀಳ್ಯದೆಲೆಗಳನ್ನು ಏರಿಸುವರು. ಕಂಬಳಿಯ ಮೇಲೆ ಅಕ್ಕಿಗುಂಪಿಯ ಮೇಲೆ ಕಲಶಗಳ ಜೊತೆಗೆ ಕೊಬ್ಬರಿ ಬಟ್ಟಲು, ಅರಿಷಿಣ ಬೇರು, ಉತ್ತತ್ತಿ, ಬಾಳೆಹಣ್ಣು, ಅಡಿಕೆಬೆಟ್ಟ, ಲಿಂಬೆಹಣ್ಣು ಎಲ್ಲವನ್ನೂ ಐದೈದರಂತೆ ಇಟ್ಟು ನೀರು, ಪಂಚಾಮೃತ, ಬಿಲ್ವಪತ್ರೆ, ಬನ್ನಿಪತ್ರೆ ಕುಂಕುಮಾದಿಯಾಗಿ ಅನೇಕ ತೆರನಾದ ಹೂಗಳನ್ನೇರಿಸಿ ಧೂಪಹಾಕಿ ಕರ್ಪೂರ ಬೆಳಗಿ ನೈವೇದ್ಯ ತೋರಿಸಿ ತಾಂಬೂಲ, ದಕ್ಷಿಣೆ ಇಟ್ಟು ಕಾಯಿಯ ಮೇಲೆ ಕರ್ಪೂರ ಹಾಕಿ ಬೆಳಗಿ ಕಾಯಿ ಒಡೆಯುವರು. ಇಷ್ಟಾದರೆ ಪಂಚಗಳಸದ ಪೂಜೆ ಆದಂತೆ. ಇದಾದ ಮೇಲೆ ವಿಘ್ನೇಶ್ವರನ ರೂಪದಲ್ಲಿ ಪೂಜೆ ಮಾಡುವ ಗಾಂಗೆ ಕಲಶಕ್ಕೆ ಒಂದು ಅಡಿಕೆಬೆಟ್ಟ ಒಂದು ಚರಿಗೆ, ಅದರ ಮೇಲೆ ಕಾಯಿಯಿಟ್ಟು ಪೂಜೆ ಮಾಡುವರು. ಪಾರ್ವತಿ ಕಲಶಕ್ಕೆ ಒಂದು ಕಣ ಏರಿಸಿ ತಂಬಿಗೆಯಲ್ಲಿ ನೀರು ತುಂಬಿ ವೀಳ್ಯದೆಲೆ ಸಹಿತ ಕಾಯಿ ಏರಿಸಿ ಕೊಬ್ಬರಿ ಬಟ್ಟಲು, ಉತ್ತತ್ತಿ, ಅರಿಷಿಣ ಬೇರು ಇಟ್ಟು ಪೂಜೆ ಮಾಡುವರು.[೭]

ಪ್ರಸ್ತುತ ಕಂಬಳಿ ಮೇಲಿರುವ ಅಕ್ಕಿಗುಂಪಿ ಅಲಂಕರಿಸಿದ ಕಲಶಗಳ ಎದುರಿಗೆ ಇರಿಸಿದ ಪೂಜಾಸಾಮಗ್ರಿಗಳು ಇವೆಲ್ಲ ಚಿತ್ರವತ್ತಾಗಿ ತೋರಿ ನೋಡುಗರ ಕಣ್ಣಿಗೆ ಮುದ ನೀಡುತ್ತವೆ. ಇದೇ ಸಂದರ್ಭದಲ್ಲಿ ಎಲ್ಲ ಪರಿಕರಗಳನ್ನೂ ಜೋಡಿಸುವಲ್ಲಿ ತೋರುವ ಜಾನಪದರ ಕಲೆಗಾರಿಕೆಯ ದೃಷ್ಟಿ ಅವರ ಸೌಂದರ್ಯ ಪ್ರಜ್ಞೆಯನ್ನು ಸಾಬೀತು ಪಡಿಸುತ್ತದೆ. ಪೂಜೆಯ ಸಂದರ್ಭದಲ್ಲಿ ಎಲ್ಲ ಸಾಮಗ್ರಿಗಳನ್ನು ಜೋಡಿಸಲು ಕಂಬಳಿ ಒಂದು ಕ್ಯಾನ್ವಾಸ್‌ದಂತೆ ಶೋಭಿಸುತ್ತದೆ.

ಹೀಗೆ ಕಂಬಳಿ ಹಾಸಿ ಪಂಚಗಳಸ ಸ್ಥಾಪನೆ ಮಾಡಿದ ಕಂಬಳಿಯ ಎದುರಲ್ಲಿ ಇನ್ನೊಂದು ಕಂಬಳಿಯನ್ನು ಹಾಸಿ ಅದರ ಮೇಲೆ ಅಕ್ಕಿ ಹಸೆಹೊಯ್ದು ವಧುವರರನ್ನು ಕುಳ್ಳಿರಿಸುವರು. ಅವರ ಎದುರಲ್ಲಿ ಪಂಚಗಳಸ ಸ್ಥಾಪನೆ ಮಾಡಿದ ಕಂಬಳಿಯ ಒಂದು ಬದಿಯಲ್ಲಿ ಮದುವೆ ಮಾಡಿಸುವ ಅಯ್ಯನವರು ಕುಳಿತಿರುತ್ತಾರೆ. ಅಲ್ಲಿಂದಲೇ ಮದುವೆಯ ಶಾಸ್ತ್ರಗಳನ್ನು ನಿರ್ದೇಶಿಸುತ್ತಾ ದಶಕರ್ಮಗಳನ್ನು ಮಾಡಿಸುತ್ತಾರೆ.

**ಕನ್ಯಾದಾನ:** ಪಂಚಾಚಾರ್ಯರ ಸಾಕ್ಷಿಯಾಗಿ ಪಂಚಗಳಸದ ಮುಂದಿನ ಕಂಬಳಿಯ ಮೇಲೆ ಕನ್ಯಾದಾನ ನಡೆಯದೇ ಶಾಸ್ತ್ರೋಕ್ತ ಮದುವೆ ಕಾರ್ಯ ಸಾಗದು. ಹೆಣ್ಣು ಸ್ವತಂತ್ರಳಾಗಿರಲು ಅರ್ಹಳಲ್ಲ ಎಂಬ ಮನುವಾಣಿಗನುಗುಣವಾಗಿ ಮದುವೆಗೆ ಮೊದಲು ಕನ್ಯೆ ತಂದೆ, ಸಹೋದರ ಅಥವಾ ಸೋದರ ಮಾವನ ಅಧೀನದಲ್ಲಿರುವಳು. ಹಾಗೆಯೆ ಮದುವೆ ನಂತರದಲ್ಲಿ ಗಂಡನ ಅಧೀನದಲ್ಲಿರುವಳೆನ್ನಲಾದ್ದರಿಂದ ಅವಳ ಜವಾಬ್ದಾರಿಯ ಹಸ್ತಾಂತರದ ಸಂಕೇತವಾಗಿ ಕನ್ಯಾದಾನದ ಕಾರ್ಯ ನೆರವೇರುತ್ತದೆ. ಈ ಸಂದರ್ಭದಲ್ಲಿ ವಧುವರರು ಕಂಬಳಿಯ ಮೇಲೆ ಕುಳಿತಿರುವಂತೆಯೇ ವರನ ಬೊಗಸೆಯಲ್ಲಿ ಕನ್ಯೆಯ ಬೊಗಸೆಯನ್ನಿಟ್ಟು, ಕನ್ಯೆಯ ಬೊಗಸೆಯಲ್ಲಿ ಒಂದು ತೆಂಗಿನಕಾಯಿಯನ್ನಿಟ್ಟು ಇವರಿಬ್ಬರ ಕೈಕೆಳಗೆ ಒಂದು ತಾಟನ್ನಿಟ್ಟು ಸ್ವಾಮಿಗಳು ಶುದ್ಧೀಕರಿಸಿಕೊಟ್ಟ ನೀರನ್ನು ವಧುವಿನ ತಂದೆ ತಾಯಿ ವಧುವರರ ಬಲಗಡೆಯಲ್ಲಿ ನಿಂತು ಅವರ ಕೈಯಲ್ಲಿಯ ತೆಂಗಿನಕಾಯಿಯ ಮೇಲೆ ನೀರನ್ನು ಹಾಕುತ್ತ ಕನ್ಯಾದಾನ ಕಾರ್ಯ ನೆರವೇರಿಸಿಕೊಡುತ್ತಾರೆ.

**ಗೂಡಜೀರಕ:** ಪಂಚಗಳಸದ ಮುಂದಿನ ಕಂಬಳಿಯ ಮೇಲೆ ಕುಳಿತಿರುವಂತೆಯೇ ಗೂಡಜೀರಕ ಅರ್ಥಾತ್ ಜೀರಿಗೆ-ಬೆಲ್ಲದ ಕಾರ್ಯವನ್ನು ಮಾಡಲಾಗುತ್ತದೆ. ಹಿಂದಿಯಲ್ಲಿ ಗೂಡ ಅಂದರೆ ಬೆಲ್ಲ, ಜೀರಕ ಎಂದರೆ ಜೀರಿಗೆ. ಮದುವೆ ಸಂದರ್ಭದಲ್ಲಿ ವಧು ಬೊಗಸೆಯಲ್ಲಿ ಬೆಲ್ಲ-ಜೀರಿಗೆ ತೆಗೆದುಕೊಂಡು ವರನ ತಲೆಯ ಮೇಲೆ ಹಾಕುವಳು. ಇದೇ ತೆರನಾಗಿ ವರ ವಧುವಿನ ತಲೆಯ ಮೇಲೆ ಜೀರಿಗೆ-ಬೆಲ್ಲ ಹಾಕುವನು. ಪ್ರಸ್ತುತ ನಡೆಯುವ ಮದುವೆಯ ಆಚರಣೆಗಳಲ್ಲಿ ಈ ಕಾರ್ಯ ಮಾಯವಾಗಿ ಕನ್ಯಾದಾನದ ನಂತರದಲ್ಲಿ ಒಮ್ಮೆಲೇ ಮಾಂಗಲ್ಯಧಾರಣ ಕ್ರಿಯೆ ನೆರವೇರುವುದನ್ನೆ ಹೆಚ್ಚಾಗಿ ಕಾಣುತ್ತೇವೆ.

**ಮಾಂಗಲ್ಯಧಾರಣ:** ಮದುವೆಯ ಪ್ರಮುಖಕಾರ್ಯವೇ ಮಾಂಗಲ್ಯ ಧಾರಣ. ತಂದೆ-ತಾಯಿಗಳು ಧಾರೆಯೆರೆದು ಕೊಟ್ಟ ವಧುವಿಗೆ ಮಂಗಲಕರವಾದ ತಾಳಿಯನ್ನು ಕಟ್ಟುವುದರ ಮೂಲಕ ವರನಿಗೆ ವಧು

ಸಂಪೂರ್ಣ ಒಪ್ಪಿತಳಾಗುವ ಸಂಪ್ರದಾಯ ಬದ್ಧಕಾರ್ಯ. ಮುತ್ತೈದೆಯರು ಪೋಣಿಸಿಕೊಟ್ಟ ಮಾಂಗಲ್ಯವನ್ನು ಅಯ್ಯನವರಿಗೆ ಕೊಡುವರು. ಅವರು ಆ ತಾಳಿಯನ್ನು ಕಂಬಳಿಯ ಮೇಲೆ ಒಂದು ಒಣಕೊಬ್ಬರಿ ಬಟ್ಟಲಲ್ಲಿ ಅಥವಾ ವೀಳ್ಯದೆಲೆಯಲ್ಲಿ ಹಾಕಿ ಪಂಚಗಳಸದ ಹತ್ತಿರ ಇಡುವರು. ಈ ಮಾಂಗಲ್ಯಕ್ಕೆ ವಿಭೂತಿ, ಕುಂಕುಮಾಕ್ಷತೆ, ಮಂತ್ರ ಮುಂತಾದವುಗಳಿಂದ ಪೂಜಿಸಿದ ನಂತರದಲ್ಲಿ ಮಾಂಗಲ್ಯಧಾರಣೆ ನಡೆಯುತ್ತದೆ. ನಂತರ ವಧುವರರು ಗಂಡ-ಹೆಂಡಿರಾಗಿ ಮುಂದಿನ ಬಾಳಿಗೆ ಅಡಿಯಿಡುವರು. ಮಾಂಗಲ್ಯ ಧಾರಣೆಯ ನಂತರದಲ್ಲಿ ವಧುವರರು ತಾವು ಕುಳಿತ ಕಂಬಳಿಯ ಮೇಲೆಯೇ ಎದ್ದು ನಿಂತು ತಮ್ಮ ಸ್ಥಾನವನ್ನು ಅದಲು ಬದಲು ಮಾಡಿ ಮತ್ತೆ ಅದೇ ಕಂಬಳಿಯ ಮೇಲೆ ಕುಳಿತು ಮುಂದಿನ ಆಚರಣೆಗಳಿಗೆ ಅಣಿಯಾಗುತ್ತಾರೆ.

ಮಾಂಗಲ್ಯದಾರಣೆಯ ನಂತರ ಪರಸ್ಪರ ಸ್ಥಾನ ಬದಲಾವಣೆ ಮಾಡಿದ ಮೇಲೆ ಅಕ್ಷತಾರೋಹಣ ಕಾರ್ಯವಾಗುತ್ತದೆ. ವಧುವರರಿಗೆ ಹಾರೈಕೆಯ ರೂಪದಲ್ಲಿ ಅಕ್ಷತಾರೋಹಣವಾದ ಮೇಲೆ ಅದೇ ಹಸೆಹೊಯ್ದು ಕಂಬಳಿಯ ಮೇಲೆ ಆಜ್ಯಕ್ಷೀರವೆಂಬ ಕಾರ್ಯ ನೆರವೇರಿಸುತ್ತಾರೆ. ಈ ಕಾರ್ಯದಲ್ಲಿ ಗುರುಗಳ ಮಂತ್ರೋಚ್ಚಾರಣೆ ಯೊಂದಿಗೆ ಒಂದು ತಟ್ಟೆಯಲ್ಲಿ ಹಾಲು-ತುಪ್ಪ ಅಥವಾ ಪಂಚಾಮೃತವನ್ನು ಹಾಕಿ ಅದರಲ್ಲಿ ವಧುವರರ ಹಸ್ತಗಳನ್ನು ಅದ್ದಿಸುತ್ತಾರೆ. ಈ ಹೊಸ ಜೋಡಿಯ ಮುಂದಿನ ಜೀವನ ಸಮೃದ್ಧತೆಯಿಂದ ಕೂಡಿರಲೆಂದು ಆಶಿಸುವ ಕಾರ್ಯ ಇದಾಗಿದೆ. ಈ ಆಚರಣೆಯ ನಂತರ ಪಂಚಗಳಸದ ಮುಂದಿನ ಕಂಬಳಿಯ ಎದುರಲ್ಲಿ ವಧುವರರು ಕುಳಿತಿರುವಂತೆಯೇ ವಧುವಿಗೆ ಕಾಲುಂಗುರ, ನಾಸಿಕಾಭೂಷಣ (ಮೂಗುತಿ) ಕೊಡಲಾಗುತ್ತದೆ.

**ಫಲದಾನ:** ಈಗ ವಧುವಿಗೆ ಮಾಂಗಲ್ಯ, ಕಾಲುಂಗುರ, ಮೂಗುತಿಗಳೆಲ್ಲವನ್ನೂ ತೊಡಿಸಿದ ನಂತರ ಅವಳು ಸುಮಂಗಲಿಯಾಗಿ ಎಲ್ಲ ಮಂಗಲ ಕಾರ್ಯಗಳಿಗೆ ಅರ್ಹಳಾಗುವಳು. ಈಗ ತಾನೇ ಮುತ್ತೈದೆಯಾದ ಅವಳ ಮಡಿಲು ಸಕಲ ಸೌಭಾಗ್ಯದಿಂದ ತುಂಬಲೆಂಬ ಆಶಯದಿಂದ ಉಡಿತುಂಬುವುದೇ ಫಲದಾನ. ಈ ಕಾರ್ಯವನ್ನು ವರನು ನೆರವೇರಿಸಿಕೊಡುತ್ತಾನೆ. ವಧು ಕಂಬಳಿಯ ಮೇಲೆ ಕುಳಿತಿರುವಂತೆಯೇ ವರ ವಧುವಿನ ಉಡಿ ತುಂಬುವನು. ಇಷ್ಟು ಉಡಿತುಂಬುವುದಾದ ನಂತರದಲ್ಲಿ ಮದುವೆಯ ವಿಧಿವಿಧಾನ ಬ್ರಹ್ಮಗಂಟಿನ ಕಾರ್ಯಕ್ಕೆ ಸಾಗುತ್ತದೆ.

**ಬ್ರಹ್ಮಗಂಟು:** ಪಂಚಗಳಸದ ಎದುರಿನ ಕಂಬಳಿಯ ಮೇಲೆ ಕುಳಿತಿರುವಂತೆಯೇ ಮೇಲೆ ಹೇಳಿದ ಎಲ್ಲ ಕಾರ್ಯಗಳ ನಂತರ ಈ ಬ್ರಹ್ಮಗಂಟನ್ನು ಹಾಕುವರು. ಮದುಮಗ ಹೊತ್ತುಕೊಂಡ ಶಲ್ಯಕ್ಕೂ, ಮದುಮಗಳು ಹೊದ್ದುಕೊಂಡ ಮೇಲ್ಮುಸುಕಿನ ಸೀರೆಯ ಸೆರಗಿಗೂ ಮದುವೆ ಮಾಡಿಸಿದ ಗುರುಸ್ವರೂಪಿ ಸ್ವಾಮಿಗಳು ಹಾಕುವ ಗಂಟೇ ಬ್ರಹ್ಮಗಂಟು. ಎಳ್ಳು, ಜೀರಿಗೆ, ಬೆಲ್ಲ, ಕಡಲೆಬೇಳೆ, ಉತ್ತತ್ತಿ, ಅರಿಷಿಣ, ಉದ್ದಿನ ಬೇಳೆ, ಅಡಿಕೆ ಬೆಟ್ಟಗಳನ್ನೆಲ್ಲ ಒಂದು ಹೊಸ ಬಟ್ಟೆಯಲ್ಲಿ ಕಟ್ಟಿ ಸೀರೆಯ ಸೆರಗು ಮತ್ತು ಶಲ್ಯದ ಮಧ್ಯ ಅದನ್ನಿಟ್ಟು ಗಂಟು ಕಟ್ಟುವರು. ಈಗ ಪ್ರಾರಂಭವಾದ ಈ ಸಂಬಂಧ ಅನುಗಾಲ ಉಳಿಯಲೆಂಬ ಹಾರೈಕೆಯೇ ಈ ಕಾರ್ಯದ ಹಿಂದಿದೆ.

ಇದಾದ ನಂತರ ಅರುಂಧತಿ ದರ್ಶನ ಒಂದಾದರೆ ಪಂಚಗಳಸದ ಎದುರಿನ ಕಂಬಳಿಯ ಮೇಲೆ ನಡೆಯುವ ಆಚರಣೆಗಳು ಸಮಾಪ್ತವಾದಂತೆ. ಪಂಚಗಳಸದ ಎದುರಿನ ಮದುವೆಯ ಆಚರಣೆಗಳು ಮುಗಿಯುತ್ತಿದ್ದಂತೆಯೇ ಮದುವೆಯ ನಂತರ ಆಚರಿಸುವ ಕೆಲವೊಂದು ಆಚರಣೆಗಳಲ್ಲೂ ಕಂಬಳಿಯ ಬಳಕೆಯನ್ನು ಕಾಣುತ್ತೇವೆ. ಅವುಗಳಲ್ಲಿ ಭೂಮವೂ ಒಂದು.

**ಭೂಮ:** ಮದುವೆ ಸಂದರ್ಭದಲ್ಲಿ ಸೇರಿದ ಜನರ ವಕ್ರದೃಷ್ಟಿ ಮದುಮಕ್ಕಳಿಗೆ ತಟ್ಟಬಾರದೆಂಬ ಉದ್ದೇಶದಿಂದ 'ಭೂಮ' ಎಂಬ ದೃಷ್ಟಿನಿವಾರಣೆಯಂಥ ಆಚರಣೆಯ ಸಂಪ್ರದಾಯ ನಮ್ಮಲ್ಲಿದೆ. ಅಲ್ಲದೇ ಈ ಆಚರಣೆಯ ಹಿಂದೆ ಬೀಗಬೀಗರ ಮಧ್ಯದಲ್ಲಿ ಸಾಮರಸ್ಯ ಬೆಳೆಯಲೆಂಬ ಉದ್ದೇಶವೂ ಇದ್ದಂತೆ ತೋರುತ್ತದೆ. ಭೂಮ ಎಂದರೆ 'ಮದುವೆಗಂಡು ಹೆಣ್ಣುಗಳಿಗಾಗಿ ಮಾಡಿಹಾಕುವ ವಿಶೇಷ ಊಟ' ಎನ್ನುವ ವಿವರಣೆಯನ್ನು ಕಾಪಸೆ ರೇವಪ್ಪನವರು 'ಮಲ್ಲಿಗೆ ದಂಡೆ'ಯಲ್ಲಿ ಕೊಡುತ್ತಾರೆ. ಈ ಆಚರಣೆಯಲ್ಲಿ ಮದುಮಗನ ತಾಯಿ, ಅಕ್ಕ-ತಂಗಿಯರು ಸೇರಿ ಹಂದರದಲ್ಲಿಯೇ ಒಲೆ ಹೂಡಿ ಕನಿಷ್ಟ ಪಕ್ಷ ಐದು ತರಹದ್ದಾದರೂ ಅಡಿಗೆ ಮಾಡುತ್ತಾರೆ. ದೈವದ ಅಕ್ಕಿಕಾಳಾದ ಮೇಲೆ ಮದುಮಕ್ಕಳನ್ನು ಒಳಗೆ ಕರೆದುಕೊಂಡು ಬಂದು ಕರಿಯ ಕಂಬಳಿ ಹಾಸಿ ಹಸೆ ಹೊಯ್ದು ಅದರ ಮೇಲೆ ಅವರನ್ನು ಕೂಡಿಸುತ್ತಾರೆ. ನಂತರದಲ್ಲಿ ಮಾಡಿದ ಎಲ್ಲ ತರಹದ ಅಡುಗೆಯನ್ನು ಒಂದು ತಾಟಿನಲ್ಲಿ ಹಾಕಿ ಕಂಬಳಿಯ ಎದುರಿನಲ್ಲಿಟ್ಟು ಅದರ ಮೇಲೆ ಇನ್ನೊಂದು ತಟ್ಟೆಯನ್ನು ಮುಚ್ಚಿಡುವರು. ತರುವಾಯ ಭೂಮದ ಹಾಡು ಆದ ಮೇಲೆ ಎಲ್ಲರ ಊಟ ನಡೆಯುತ್ತದೆ.

ಹೆಚ್ಚೂಕಡಿಮೆ ಮದುವೆಯ ಕೊನೆಯ ಶಾಸ್ತ್ರಗಳಾದ ಹೆಣ್ಣೊಪ್ಪಿಸುವುದು ಮತ್ತು ಐದನೀರು ಮಾಡುವಾಗಲೂ ಕಂಬಳಿಯನ್ನು ಪೀಠದಂತೆ ಬಳಸಲಾಗುತ್ತದೆ. ಹೀಗೆ ಕನ್ಯೆ ನೋಡಲು ಹೋಗುವುದರಿಂದ ಪ್ರಾರಂಭವಾಗಿ ಮದುಮಗಳು ಹೊಸಮಾಲಗಿತ್ತಿಯಾಗಿ ಗಂಡನ ಮನೆ ಸೇರುವವರೆಗಿನ ಬಹುತೇಕ ಆಚರಣೆಗಳಲ್ಲಿ ಕಂಬಳಿ ಪ್ರಮುಖ ಪಾತ್ರವಹಿಸುತ್ತದೆ. ಮೇಲೆ ಹೇಳಿದ ಎಲ್ಲ ಆಚರಣೆಗಳೂ ಇಂದು ಕಡ್ಡಾಯವಾಗಿ ನಡೆಯುತ್ತವೆ ಎನ್ನಲಾಗದಿದ್ದರೂ ಸ್ವಲ್ಪ ಹೆಚ್ಚು ಕಡಿಮೆಯಾಗಿ ಅಲ್ಪಸ್ವಲ್ಪ ಬದಲಾವಣೆ ಗಳೊಂದಿಗೆ ಜರುಗುತ್ತವೆ. ಆಶ್ಚರ್ಯವೆಂದರೆ ಮಾಡುವ ಆಚರಣೆಗಳಲ್ಲಿ ಬದಲಾವಣೆಗಳನ್ನು ಕಾಣುತ್ತೇವಾದರೂ ಆ ಕಾರ್ಯಗಳಲ್ಲಿ ಕಂಬಳಿಯ ಬಳಕೆ ಮಾತ್ರ ಸ್ಥಿರವಾಗಿರುವುದು ಸೋಜಿಗವನ್ನುಂಟು ಮಾಡುತ್ತದೆ. ಇಷ್ಟೊಂದು ಆಧುನಿಕತೆಯ ಭರಾಟೆ, ಸಮಯದ ಅಭಾವ, ಸರಳ-ಸಂಕ್ಷಿಪ್ತಗೊಳಿಸಿಕೊಳ್ಳುವ ಮನೋಭಾವದ ಮಧ್ಯದಲ್ಲೂ ಕಂಬಳಿ ಇಂದಿಗೂ ತನ್ನತನವನ್ನು ಉಳಿಸಿಕೊಂಡಿರುವುದು ಜನಪದರಲ್ಲಿರುವ ಕಂಬಳಿಯ ಬಗೆಗಿನ ವಿಶೇಷ ಶ್ರದ್ಧೆಯನ್ನು ಪ್ರಕಟಪಡಿಸುತ್ತದೆ.

ಮದುವೆ ಸಂಪ್ರದಾಯದ ವಿವಿಧ ಆಚರಣೆಗಳಲ್ಲಿ ಬಳಕೆಯಾದ ಕಂಬಳಿ ಮದುವೆ ನಂತರದ ಹಂತದ ಸೀಮಂತ ಕಾರ್ಯದಂಥ ಶುಭ ಸಂದರ್ಭದಲ್ಲಿಯೂ ಎಡೆ ಪಡೆದಿದೆ.

**ಸೀಮಂತ ಅಥವಾ ಕುಬಸ:** ಚೊಚ್ಚಲ ಗರ್ಭಿಣಿ ಬಯಸಿದ ಅಡುಗೆ ಮಾಡಿ ಹೂ ಮುಡಿಸಿ ಆರತಿ ಮಾಡಿ ತಾಯಿ ಹಾಗೂ ಹುಟ್ಟಲಿರುವ ಮಗುವಿನ ಕ್ಷೇಮವನ್ನು ಹಾರೈಸುವುದೇ ಸೀಮಂತ. ಉತ್ತರ ಕರ್ನಾಟಕದ ಭಾಗದಲ್ಲಿ ಎರಡು ಬಾರಿ ಸೀಮಂತ ಮಾಡುವ ಸಂಪ್ರದಾಯವಿದೆ. ಈ ಎರಡೂ ಕುಬಸಗಳಲ್ಲಿ ಕಂಬಳಿಯ ಪಾತ್ರವಿದೆಯಾದರೂ ಮೊದಲಬಾರಿ ಮಾಡುವ ಕಳ್ಳ ಕುಬಸವೇ ಪ್ರಧಾನ ಚಾಜವೆಂದು ಪರಿಗಣಿಸಲ್ಪಡುವುದರಿಂದ ಅಲ್ಲಿ ಬಳಕೆಯಾಗುವ ಕಂಬಳಿಗೂ ಇರುವ ಮಹತ್ವದ ಸ್ಥಾನವನ್ನು ಗುರುತಿಸಬಹುದು.

ಕಳ್ಳ ಕುಬಸ ಗರ್ಭಿಣಿಯಾದ ಮೂರು ನಾಲ್ಕು ತಿಂಗಳಲ್ಲಿ ತವರಿನವರೇ ಎಲ್ಲವನ್ನೂ ತಂದು ಮಾಡುವ ಸೀಮಂತ. ಇದರ ಇನ್ನೊಂದು ವಿಶೇಷತೆಯೆಂದರೆ 'ಎಂಬಲ ಗಡಿಗೆ'ಯ ಪೂಜೆ. ಅಂಬಲಿ ಗಡಿಗೆಯೇ ಜನಪದರ ಬಾಯಲ್ಲಿ ಎಂಬಲ ಗಡಿಗೆಯಾಗಿದೆ. ಕಳ್ಳ ಕುಬಸದ ಸಂದರ್ಭದಲ್ಲಿನ ಎಂಬಲ ಗಡಿಗೆ ಪೂಜೆಗೆ ಹೊಸ ಗಡಿಗೆ ತಂದು ಕಂಬಳಿ ಹಾಸಿ ಅದರ ಮೇಲೆ ಜೋಳದ ನಿಧಿಹಾಕಿ ಮೇಲೆ ಹೊಸ ಗಡಿಗೆಯನ್ನಿಟ್ಟು ಆ ಗಡಿಗೆಯಲ್ಲಿ ಸಿಪ್ಪೆ ಸಮೇತವಾದ ಕುಟ್ಟಿದ ಜೋಳ, ನೀರು, ಉಪ್ಪು ಮತ್ತು ಸ್ವಲ್ಪ ಹುಳಿಹಾಕಿ ಮೇಲೆ ಮುಚ್ಚಳವನ್ನು ಮುಚ್ಚಿಡುವರು. ಅನಂತರ ಆ ಗಡಿಗೆಗೆ ಗರ್ಭಿಣಿಗಾಗಿ ತಂದಂತಹ ದಂಡೆ ಹಾಕಿ ಉಡಿ ಸಾಮಾನುಗಳನ್ನಿಟ್ಟು ಅತ್ತಿ ಹಣ್ಣಿನ ಗೊಂಚಲನ್ನು ಇಡುವರು. ಅಲ್ಲದೇ ಹಿಂದಿನ ದಿನ ಸ್ವಲ್ಪ ಗೋಧಿ ನೆನೆಹಾಕಿ ನೆನೆದ ಗೋಧಿಕಾಳುಗಳನ್ನು ಪೋಣಿಸಿ ಮಾಲೆ ಮಾಡಿ ಗಡಿಗೆಗೆ ಹಾಕುವರು.[೮] ಹೀಗೆ ಪೂಜೆ ಮಾಡಿದ ಎಂಬಲ ಗಡಿಗೆಯ ಎದುರಲ್ಲಿ ಒಂದು ಕಂಬಳಿ ಹಾಸಿ ಮೇಲೆ ಹಸೆ ಹೊಯ್ದು ಗರ್ಭಿಣಿಯನ್ನು ಕೂಡಿಸುತ್ತಾರೆ. ಎಂಬಲಗಡಿಗೆಗೆ ಹಾಕಿದ ದಂಡೆಯನ್ನೇ ತೆಗೆದು ಗರ್ಭಿಣಿಗೆ ಅದೇ ದಂಡೆ ಕಟ್ಟಿ, ಆ ಗಡಿಗೆಗಿಟ್ಟಿರುವ ಉಡಿಯನ್ನೇ ತೆಗೆದು ಗರ್ಭಿಣಿಯ ಉಡಿಯಲ್ಲಿ ಹಾಕುವರು. ಇದಿಷ್ಟು ಕಳ್ಳಕುಬಸದಲ್ಲಿ ಮಾಡುವ ಆಚರಣೆ. ಈ ಆಚರಣೆಯ ಹಿನ್ನೆಲೆಯಲ್ಲಿ ಜನಪದರು ಒಂದು ಪ್ರತೀತಾತ್ಮಕ ಅರ್ಥವನ್ನು ಅದರೊಂದಿಗೆ ಕಂಬಳಿ ಕುರಿತಾಗಿರುವ ಅವರ ನಂಬಿಕೆಯನ್ನು ಈ ರೀತಿಯಲ್ಲಿ ಅರ್ಥೈಸಬಹುದೆನ್ನಿಸುತ್ತದೆ:

ಸೃಷ್ಟಿಕ್ರಿಯೆಗೆ ಸಂಕೇತಾರ್ಥವಾಗಿ ಮಣ್ಣಿನ ಗಡಿಗೆಯನ್ನು ತೆಗೆದುಕೊಂಡು ಆ ಗಡಿಗೆಯಲ್ಲಿ ಹಾಕುವ ಹುಳಿ ಕಾಮವನ್ನು ಸಂಕೇತಿಸುತ್ತದೆ. ಅಲ್ಲದೇ ಸಿಗ್ಮಂಡ ಫ್ರಾಯ್ಡ್‌ನ ಮನೋವಿಶ್ಲೇಷಣೆಯ ಹಿನ್ನೆಲೆಯಲ್ಲಿ ಕೆಲವರು ಉಪ್ಪನ್ನು ಪುರುಷನ ವೀರ್ಯದ ಸಂಕೇತವೆಂದೂ ಅಭಿಪ್ರಾಯಪಡುತ್ತಾರೆ.[೯] ಹಾಗೆ ಕುಟ್ಟಿದ ಜೋಳ ವೀರ್ಯ ಒಡೆದು ಫಲವಂತಿಕೆಗೆ ಅಣಿಯಾಗಿರುವುದನ್ನು, ನೀರು ಈ ಗರ್ಭವನ್ನು ಪೋಷಿಸುವ ಜೀವಜಲಕ್ಕೆ ಸಂಕೇತವಾಗಿದೆ. ಈ ಎಲ್ಲವನ್ನೂ ಗಡಿಗೆಯಲ್ಲೇ ಹಾಕಿ ಮುಚ್ಚಿಡುವುದು ತಾಯಿ ಗರ್ಭದಲ್ಲಿ ಶಿಶು ರೂಪುಗೊಳ್ಳುತ್ತಿರುವ ಪ್ರಕ್ರಿಯೆಯನ್ನು ಸೂಚಿಸುತ್ತದೆ. ಎಂಬಲ ಗಡಿಗೆಯ ಮೇಲೆ ಹಾಕುವ ನೆನೆಸಿದ ಗೋಧಿಯ ಹಾರ ಗರ್ಭಿಣಿಗೆ ಮತ್ತು ಗರ್ಭ ನೆಲೆಗೊಳ್ಳಲು ಬೇಕಾದ ಗಟ್ಟಿತನವನ್ನೂ ಕೂಡ ಹಾರೈಸುವುದಾಗಿದೆ.

ಹೀಗೆ ಸಂಕೇತಾತ್ಮಕವಾಗಿ ಕಂಬಳಿ ಮೇಲೆ ಪೂಜೆ ಮಾಡಿದ ಎಂಬಲ ಗಡಿಗೆಯ ಎದುರಲ್ಲಿ ಆ ಗಡಿಗೆಯ ಮೂರ್ತರೂಪವಾಗಿರುವ ಗರ್ಭಿಣಿಯನ್ನು ಕಂಬಳಿ ಹಾಸಿ ಕೂಡಿಸುವುದನ್ನು ನೋಡಿದಾಗ

ಜನಪದರಿಗೆ ಯಾವುದೇ ಹಿಂಸೆಯಿಲ್ಲದೇ ದೊರೆಯುವ ಈ ಕಂಬಳಿ ಚೇತನ ಶಕ್ತಿಯ ಸ್ವರೂಪವಾಗಿ ತೋರುತ್ತದೆ. ಹಾಗಾಗಿಯೇ ಇನ್ನೊಂದು ಚೇತನಕ್ಕೆ ಜೀವಕೊಡುವ ಆ ಗರ್ಭಿಣಿಯನ್ನು ಕೂಡಿಸಲು ಕಂಬಳಿಯೇ ಯೋಗ್ಯವೆಂದು ಪರಿಗಣಿಸುವಂತಿದೆ. ಅಂತೆಯೇ ದೊಡ್ಡ ಕುಬಸದಲ್ಲಿಯೂ ಕಂಬಳಿ ಹಾಸಿಯೇ ಗರ್ಭಿಣಿಯನ್ನು ಕೂಡಿಸುತ್ತಾರೆ. ಹೀಗೆ ಸೀಮಂತದಲ್ಲಿ ಕಂಬಳಿ ಬಳಕೆಗೊಳ್ಳುವ ವಿಶಿಷ್ಟ ಪರಿಯನ್ನು ಕಾಣುತ್ತೇವೆ.

**ನಾಮಕರಣ:** ಸೀಮಂತದ ನಂತರ ಹೆರಿಗೆಯಾದ ೧೩ನೆಯ ದಿನಕ್ಕೆ ಮಾಡುವ ಕೂಸಿನ ನಾಮಕರಣ ಸಂದರ್ಭದಲ್ಲಿಯೂ ಕಂಬಳಿಯ ಉಪಸ್ಥಿತಿಯನ್ನು ಕಾಣುತ್ತೇವೆ. ನಾಮಕರಣದ ಹೊತ್ತಿಗೆ ಸಿಂಗರಿಸಿ ಕಟ್ಟಿದ ತೊಟ್ಟಿಲ ಕೆಳಗೇ ಕಂಬಳಿ ಹಾಸಿ ಕೂಸಿನ ತಾಯಿಯನ್ನು ಅದರ ಮೇಲೆ ಕೂಡಿಸುವರು. ಅವಳ ಮುಂದೆ ತುಂಬಿದ ಕೊಡ ಇಟ್ಟು ಅದರ ಮೇಲೆ ಒಂದು ತಟ್ಟೆಯಲ್ಲಿ ಕಣಕದಾರತಿಯನ್ನು ಹಚ್ಚಿಡುವರು. ತೊಟ್ಟಿಲ ಕೆಳಗೆ ಕಂಬಳಿ ಹಾಸಿ ಹೀಗೆ ತಾಯಿಯನ್ನು ಕೂಡಿಸುವುದು ಚೊಚ್ಚಿಲ ಮಗುವಿನ ನಾಮಕರಣಕ್ಕೆ ಮಾತ್ರ ಎನ್ನುವುದು ವಿಶೇಷ.[೧೦] ನಂತರ ಕೂಸಿನ ಸೋದರತ್ತೆಯರು ಮಗುವಿಗೆ ಹೆಸರಿಡುವರು. ಹೀಗೆ ತೊಟ್ಟಿಲ ಕೆಳಗೆ ಕಂಬಳಿ ಹಾಸುವ ಕಾರಣಕ್ಕಾಗಿಯೇ ಕಂಬಳಿ ನಾಮಕರಣ ಶಾಸ್ತ್ರದಲ್ಲಷ್ಟೇ ಅಲ್ಲ ಬದುಕಿಗೆ ಮುಖ್ಯ ಎನ್ನುವುದನ್ನು ಈ ಆಚರಣೆ ಸೂಚಿಸುತ್ತದೆ. ಮೇಲೆ ಹೇಳಿದಂತೆ ತೊಟ್ಟಿಲ ಕೆಳಗೆ ತಾಯಿ ಇರುವುದು ಕೂಸಿಗೆ ತಾಯಿಯೇ ಆಧಾರ ಎನ್ನುವುದನ್ನು ಹೇಳುತ್ತದೆ. ತಾಯಿಯ ಕೆಳಗೆ ಕಂಬಳಿ ಇರುವುದು ತಾಯಿಗೆ ಕಂಬಳಿಯೇ ಆಧಾರ ಎನ್ನುವಲ್ಲಿ ಹೆತ್ತ ಬಾಣಂತಿಯನ್ನು ಕಂಬಳಿ ಎಲ್ಲಾ ವಿಧದಲ್ಲೂ ರಕ್ಷಿಸುತ್ತದೆ ಎಂಬ ಭಾವವನ್ನು ಕಾಣುತ್ತೇವೆ. ಕಂಬಳಿಯ ಕೆಳಗೆ ಭೂಮಿ ಇದ್ದು ಕಂಬಳಿಗೆ ಭೂಮಿಯೇ ಆಧಾರ ಎನ್ನುವುದನ್ನು ನೋಡಿದಾಗ ಜನಪದರ ಅದ್ಭುತ ಸಾಂಕೇತಿಕತೆಯನ್ನು ಅರ್ಥೈಸುವುದು ಕಷ್ಟ ಸಾಧ್ಯವೆನ್ನಿಸುತ್ತದೆ.

**ಜವಳ ತೆಗೆಯುವುದು:** ಹುಟ್ಟಿದ ಕೂಸಿಗೆ ಕೂದಲನ್ನು ಮೊದಲ ಬಾರಿ ಕತ್ತರಿಸುವ ಶಾಸ್ತ್ರ ಮಾಡುವುದೇ ಜವಳ ತೆಗೆಯುವುದು. ಇಲ್ಲಿಯೂ ಕಂಬಳಿಯ ಪಾತ್ರ ಮುಖ್ಯವಾಗುತ್ತದೆ. ಜವಳ ತೆಗೆಯುವ ಕಾರ್ಯವನ್ನು ಮನೆ ಅಥವಾ ದೇವಸ್ಥಾನದಲ್ಲಿ ತೆಗೆಸುವ ರೂಢಿಯುಂಟು. ಜವಳವನ್ನು ಎಲ್ಲಿ ತೆಗೆಸುತ್ತಾರೆನ್ನುವುದಕ್ಕಿಂತ ಎಲ್ಲೇ ತೆಗೆಸಿದರೂ ಕಂಬಳಿಯ ಮೇಲೆಯೇ ಕೂಡಿಸಿ ಜವಳ ತೆಗೆಯುತ್ತಾರೆನ್ನುವುದು ಮುಖ್ಯ ಅಂಶ. ಜವಳ ತೆಗೆಯುವ ಸ್ಥಾನ ಮನೆಯೇ ಆಗಲೀ ದೇವಸ್ಥಾನವೇ ಆಗಲಿ ಕಂಬಳಿಯ ಮೇಲೆ ಕುಳಿತಾಗ ಮೈಲಿಗೆ ದೂರಾಗುತ್ತದೆ. ಹಾಗಾಗಿಯೇ ಕಂಬಳಿ ಹಾಸಿ ಹಸೆ ಹೊಯ್ದು ಅದರ ಮೇಲೆ ತಂದೆ-ತಾಯಿಯರು ಮಗುವನ್ನೆತ್ತಿಕೊಂಡು ಕೂಡುವರು. ನಂತರವಷ್ಟೇ ಕೂಸಿನ ತಲೆಗೆ ಎಲೆಗತ್ತರಿ ಹಚ್ಚಿ ಜವಳದ ಶಾಸ್ತ್ರ ಮಾಡುವರು. ಅನಂತರ ಅವರು ಕಂಬಳಿಯ ಮೇಲೆ ಕುಳಿತಂತೆಯೇ ಬಂಧು ಬಾಂಧವರು ಕೂಸಿಗೆ, ಕೂಸಿನ ತಂದೆ-ತಾಯಿಯರಿಗೆ ಆಹೇರಿ ಮಾಡುವರು.

ಹೀಗೆ ಮಗು ಬೆಳೆದು ದೊಡ್ಡದಾದ ಮೇಲೆ ಅದಕ್ಕೆ ಬದುಕಿನ ಸಂಸ್ಕಾರಗಳನ್ನು ಕೊಡುವ ದೀಕ್ಷಾಬೋಧೆಯನ್ನು ಕೊಡುವಾಗಲೂ ಕಂಬಳಿಯ ಬಳಕೆಯಾಗುತ್ತದೆ.[೧೧] ದೀಕ್ಷಾಬೋಧೆಯೆಂದರೆ ಲಿಂಗ ಜಂಗಮರು

ಗುರುವಿನಿಂದ ಪಡೆಯುವ ದೀಕ್ಷೆಯಾಗಿದೆ. ಈ ದೀಕ್ಷಾಬೋಧೆ ವೈಯಕ್ತಿಕ ಮತ್ತು ಸಾಮೂಹಿಕ ಎರಡು ವಿಧಗಳಲ್ಲಿ ನಡೆಯುತ್ತದೆ. ಆದರೆ ಈ ಎರಡೂ ವಿಧಗಳಲ್ಲೂ ದೀಕ್ಷೆ ತೆಗೆದುಕೊಳ್ಳುವವರಿಗೆ ಆಸನವಾಗಿರುವುದು ಕಂಬಳಿಯೇ ಎನ್ನುವುದು ಗಮನಾರ್ಹ.

ಇವಿಷ್ಟು ಶುಭಕಾರ್ಯಗಳ ಸಂಪ್ರದಾಯ-ಆಚರಣೆಗಳಲ್ಲಿ ಕಂಬಳಿ ವಸ್ತ್ರವಾಗಿ ಬಳಕೆಯಾಗುವ ರೀತಿ. ಇಲ್ಲಿ ಕಂಬಳಿ ಬರೀ ವಸ್ತ್ರವಾಗಿ ಪರಿಗಣಿತವಾಗದೇ ಒಂದು ಪೂಜ್ಯನೀಯ ಭಾವ ಮಿಳಿತವಾದ ಬಟ್ಟೆಯಾಗಿ ಬಳಕೆಯಾಗುತ್ತದೆ. ಮೇಲೆ ನೋಡಿದ ಆಚರಣೆ-ಸಂಪ್ರದಾಯಗಳಲ್ಲೆಲ್ಲ ಕಂಬಳಿ ಪ್ರಮುಖವಾಗಿ ತೊಡಗಿಕೊಂಡು ಇಲ್ಲೆಲ್ಲ ವಸ್ತ್ರಕ್ಕಿಂತ ಭಿನ್ನವಾದ ಒಂದು ಪೀಠದ ರೂಪದಲ್ಲಿ ಕೆಲಸ ಮಾಡುವ ಕಾರಣಕ್ಕಾಗಿಯೇ ಅದಕ್ಕೆ ವಿಶೇಷ ಮನ್ನಣೆಯಿದೆ. ಅನೇಕ ಧರ್ಮಗುರುಗಳು ಬಳಸುವುದು ಸತ್ತಹುಲಿ, ಜಿಂಕೆಯ ಚರ್ಮದ ಪೀಠ. ಆದರೆ ಜನಪದರು ಆ ಸತ್ತಪೀಠಕ್ಕಿಂತ ಕಂಬಳಿಯನ್ನೇ ದೈವತ್ವದ ಮಟ್ಟಕ್ಕೆ ಏರಿಸುವರು. ಕಂಬಳಿಯನ್ನು ಕುರಿಯಂಥ ಸಾಧುಪ್ರಾಣಿಗೆ ಯಾವುದೇ ಹಿಂಸೆಯಾಗದಂತೆ ಅದರ ಚರ್ಮದಿಂದ ತುಪ್ಪಳವನ್ನು ಕತ್ತರಿಸಿಕೊಂಡು ತಯಾರಿಸುವರು. ಯಾವುದೇ ಜೀವಿಗೆ ಹಿಂಸೆಯಾಗದಂತೆ ಇದು ದೊರೆಯುವುದರಿಂದಲೇ ಇದಕ್ಕೊಂದು ವಿಶಿಷ್ಟ ಸ್ಥಾನಮಾನವಿದೆ. ಹೀಗೆ ಹಿಂಸಾರಹಿತವಾಗಿ ತೆಗೆದ ತುಪ್ಪಳದಿಂದ ಸಿದ್ಧಗೊಂಡ ಕಂಬಳಿ ಜನಪದರಿಗೆ ಯಾವುದೇ ಪೀಠಕ್ಕೆ ಮಿಗಿಲಾದ 'ಜೀವಂತ ಪೀಠ'ವಾಗಿ ಕಾಣಿಸಿಕೊಳ್ಳುತ್ತದೆ. ಅಂತೆಯೇ ಶುಭಕಾರ್ಯಗಳಲ್ಲಿ ಪೀಠವಾಗಿ ಬಳಸಲು ಕಂಬಳಿಯೇ ಯೋಗ್ಯವೆನ್ನಿಸಿತು. ಏಕೆಂದರೆ ಶುಭ ಸಂದರ್ಭದಲ್ಲಿ ಚೇತನ ಸ್ವರೂಪಿ ವಸ್ತು, ಜೀವಿಗಳ ಬಳಕೆಗೆ ಆದ್ಯತೆ ಇದೆಯೇ ಹೊರತಾಗಿ ಮತ್ತೊಂದು ಚೇತನದ ಬಲಿಯಿಂದ ಸಿದ್ಧಗೊಳ್ಳುವ ಪೀಠ ಆಸನಕ್ಕೆ ಯೋಗ್ಯವಲ್ಲವೆಂಬ ಭಾವ ಜನಪದರಲ್ಲಿದೆ. ಜನಪದರು ಸಾವಿಗೆ ಸೂತಕವನ್ನು ಘೋಷಿಸುವರು. ಕಂಬಳಿಗೆ ಯಾವುದೇ ಸೂತಕವಿಲ್ಲವಾದ್ದರಿಂದ ಅದಕ್ಕೆ ಮೈಲಿಗೆಯೂ ಇಲ್ಲವೆಂಬ ಕಲ್ಪನೆ ನಮ್ಮ ಸಮಾಜದಲ್ಲಿದೆ. ಹಾಗಾಗಿಯೇ ಉಣ್ಣೆ ಕಂಬಳಿಗಳಿಗೆ ಧಾರ್ಮಿಕ ಹಾಗೂ ಸಾಮಾಜಿಕ ಶುಭ ಸಂದರ್ಭಗಳಲ್ಲಿ ಪವಿತ್ರ ದೃಷ್ಟಿಯಿದೆ.

**ವಿಧಿ-ನಿಷೇಧಗಳು:** ಶುಭ ಸಮಾರಂಭಗಳಲ್ಲಿ ಬಳಸಲೆಂದೇ ಅಚ್ಚ ಕರಿಯ ಕಂಬಳಿಯನ್ನು ನಿಗದಿಪಡಿಸಿಕೊಂಡಿರುವರು. ಇದಕ್ಕೆ ಒಂದೇ ಮಗ್ಗುಲಿಗೆ ಐದು ಮುತ್ತೆಳಿ ಇರಬೇಕೆಂಬ ರೂಢಿಯಿದೆ. ಈ ಸಂದರ್ಭದಲ್ಲಿ ಹಾಸುವುದಕ್ಕೂ ಕೂಡ ತನ್ನದೇ ಆದ ರೀತಿಯಿದೆ. ಶುಭಕಾರ್ಯಗಳಲ್ಲಿ ಕಂಬಳಿಯನ್ನು ಹಾಸುವಾಗ 'ಕರಿ'* ಉತ್ತರಾಭಿಮುಖವಾಗಿ ಅಥವಾ ಪೂರ್ವಾಭಿಮುಖವಾಗಿಯೇ ಇರಬೇಕೆನ್ನುವ ನಂಬಿಕೆಯ ಜೊತೆಗೆ ಬಳಸುವ ಕಂಬಳಿ ಕರಿ ಕಟ್ಟದ್ದಾಗಿರಬೇಕು ಎನ್ನುವುದೂ ಕಡ್ಡಾಯ. ವಿಶೇಷ ಶುಭ ಸಂದರ್ಭಗಳಲ್ಲಿ ಬಳಸುವ ಈ ಕಂಬಳಿಯನ್ನು ಹಾಸುವುದಕ್ಕಾಗಲಿ, ಹಾಸಿದ ಕಂಬಳಿಯ ಮೇಲೆ ಹಸೆ ಹೊಯ್ಯುವುದಕ್ಕಾಗಲಿ ಇಂಥವರೇ ಆಗಬೇಕೆಂಬ ಕಟ್ಟುಪಾಡುಗಳಿವೆ. ಹಸೆ ಹೊಯ್ಯುವುದಕ್ಕಾಗಲಿ ಅದರ ಮೇಲೆ ಕೂಪಲಾಗಲಿ ವಿಧವೆಯರು, ಉಡುಕೆಯವರು, ಅಂಗಹೀನರು ಇವರಾರೂ ಅರ್ಹರಾಗುವುದಿಲ್ಲ. ಕಂಬಳಿಯ ಮೇಲೆ ಸೇಸೆ ಹೊಯ್ಯುವಾಗ

ಒಂದೇ ಚೌಕನ್ನು ಹೊಯ್ಯುವಂತಿಲ್ಲ. ಯಾವಾಗಲೂ ಜೋಡು ಚೌಕುಗಳೇ ಇರಬೇಕೆನ್ನುವ ಸಂಪ್ರದಾಯವಿದೆ. ಮಂಗಳ ಕಾರ್ಯಗಳಲ್ಲಿ ಯಾವುದೇ ಕಾರಣಕ್ಕೂ ಹರಿದ ಕಂಬಳಿಯನ್ನು ಬಳಸುವಂತಿಲ್ಲ. ಕಾರ್ಯಗಳಲ್ಲಿ ತಮ್ಮದೇ ಮನೆಯ ಕಂಬಳಿ ಆಗಬೇಕೆನ್ನುವುದು ಕಡ್ಡಾಯವಿಲ್ಲ. ಆದರೆ ಕಾರ್ಯಗಳಲ್ಲಿ ಯಾರದಾದರೂ ಸರಿ ಕಂಬಳಿ ಅವಶ್ಯಕ. ಇವಿಷ್ಟು ಶುಭಕಾರ್ಯಗಳಲ್ಲಿ ಕಂಬಳಿಯ ಸುತ್ತ ಸುತ್ತಿಕೊಂಡ ವಿಧಿ ನಿಷೇಧಗಳು.

ಯಾವುದೇ ಶುಭಕಾರ್ಯದಲ್ಲಿ 'ಕರಿ ಕಟ್ಟಿದ ಕಂಬಳಿ'ಗೇ ಪ್ರಾಧಾನ್ಯತೆ ಕೊಡುವುದಕ್ಕೆ ಈ ತೆರನಾದ ಕಾರಣವನ್ನು ಕಂಡುಕೊಳ್ಳಬಹುದೆನ್ನಿಸುತ್ತದೆ: ಕಂಬಳಿಗೆ ಮೈಲಿಗೆ ಇಲ್ಲ ನಿಜ; ಆದರೆ ನಿತ್ಯೋಪಯೋಗಿ ಕಂಬಳಿ ಮಾನವನ ದೈನಂದಿನ ಬದುಕಿನ ಜಂಜಾಟದಿಂದ ಮೈಲಿಗೆಯಾಗಿ ತನ್ನ ಮಡಿವಂತಿಕೆಯನ್ನು ಕಳೆದುಕೊಳ್ಳುವ ಸಾಧ್ಯತೆ ಅಷ್ಟಿಷ್ಟು ಉಂಟು. ಹಾಗಾಗಿ ಆಚರಣೆ ಸಂಪ್ರದಾಯದಂಥ ವಿಶೇಷ ಸಂದರ್ಭಗಳಲ್ಲಿ ಮನುಷ್ಯನೂ ಒಳಗೊಂಡಂತೆ ಎಲ್ಲವೂ ವಿಶೇಷ ಮಡಿತನದಿಂದ ಕೂಡಿದುದಾಗಿರಬೇಕೆಂಬ ಮನುಷ್ಯ ಸಹಜ ಹಂಬಲವೇ ಇಂಥ ಸಂದರ್ಭಗಳಲ್ಲಿ ಕರಿ ಕಟ್ಟಿದ ಕಂಬಳಿಯನ್ನೇ ಬಳಸುವುದಕ್ಕೆ ಹೆಚ್ಚಿದೆ. ಈ ಸಂಪ್ರದಾಯದ ಹಿಂದಿನ ಚಾಣಾಕ್ಷತನ ಹೀಗಿದೆ:

ಕಂಬಳಿ ಮನೆಯಲ್ಲಿದ್ದರೆ ಅದನ್ನು ಒಂದಲ್ಲಾ ಒಂದು ಕಾರ್ಯಕ್ಕೆ ಬಳಸುವುದೇ ಆಗುತ್ತದೆ. ಅದೇ ಮನೆಯಲ್ಲಿ ಕರಿ ಕಟ್ಟಿದ ಕಂಬಳಿ ಇದ್ದರೆ ಯಾರು ಅದನ್ನು ಅಷ್ಟಿಷ್ಟೇ ಕೆಲಸಗಳಿಗೆ ಉಪಯೋಗಿಸುವುದಿಲ್ಲ. ಕಂಬಳಿಗೆ ಕರಿ ಕಟ್ಟದೆ ದಿನ ಬಳಕೆಗೆ ಉಪಯೋಗಿಸಿದರೆ ಅದು ಬಹುಬೇಗ ಹಾಳಾಗುವುದೆಂಬ ತಿಳುವಳಿಕೆ ಜನಪದರಿಗಿದೆ. ಅಲ್ಲದೆ ದೈನಂದಿನ ಬಳಕೆಯ ಮೈಲಿಗೆ ಭರಿತ ಕಂಬಳಿ ವಿಶೇಷ ಸಂದರ್ಭಗಳಲ್ಲಿ ನಿಷಿದ್ಧ ಎಂದು ಒಡೆದು ಹೇಳದೆಯೇ ಅದನ್ನು ನಿಷೇಧಿಸುವ ಜನಪದರ ಚಾಣಾಕ್ಷತೆಯ ಪರಿಯನ್ನು ಇಂಥ ಸಂಪ್ರದಾಯಗಳ ತೆಕ್ಕೆಯಲ್ಲಿ ಕಾಣಬಹುದಾಗಿದೆ.

### ೨. ವ್ಯವಸಾಯ ಸಂಬಂಧಿ

ಜನಪದರಿಗೆ ಕಂಬಳಿ ಜೀವನಾವಶ್ಯಕ ವಸ್ತುಗಳಲ್ಲಿ ಒಂದು. ಹೊತ್ತು ಗೊತ್ತೆನ್ನದೆ ಗಾಳಿ-ಮಳೆಗಳಲ್ಲಿ ಹೊಲಗಳಲ್ಲಿ ದುಡಿಯುವ ರೈತರಿಗೆ ಕಂಬಳಿ ಹೊದೆದುಕೊಳ್ಳಲು, ಬೆಚ್ಚನೆಯ ವಸ್ತುವಾಗಿ ಅವರನ್ನು ರಕ್ಷಿಸುತ್ತದೆ. ಕಂಬಳಿಯ ಸ್ಥಾನಮಾನ ಕೃಷಿಕರ ವಿಷಯದಲ್ಲಿ ಇಷ್ಟಕ್ಕೆ ಮುಗಿಯುವುದಿಲ್ಲ. ಹಿಂದೆ ನೋಡಿರುವಂತೆ ಅವರು ಮದುವೆ ಮುಂತಾದ ಮಂಗಲ ಪ್ರಸಂಗಗಳಲ್ಲಿ ಅಲ್ಲದೇ ಕೃಷಿ ಆಧಾರಿತ ಅನೇಕ ಆಚರಣೆಗಳಲ್ಲಿಯೂ ಕಂಬಳಿಯನ್ನು ಬಳಸುತ್ತಾರೆ.

ಬಿತ್ತನೆಯೆನ್ನುವುದು ಕೃಷಿ ಸಮುದಾಯಕ್ಕೆ ತುಂಬ ಮಹತ್ವದ ಸಂದರ್ಭ. ಬಿತ್ತುವ ಬೀಜ ಮೊಳಕೆ ಯೊಡೆದು ಸಸಿಯಾಗಿ ಪೈರಾಗಿ ಫಲನೀಡಲು ದೈವಾನುಗ್ರಹಬೇಕೆನ್ನುವುದು ಒಕ್ಕಲಿಗರ ನಂಬಿಕೆ. ಆದ್ದರಿಂದ ಬಿತ್ತನೆಗೆ ಹೋಗುವ ಪೂರ್ವದಲ್ಲಿ ಕೂರಿಗೆ ಪೂಜೆಯನ್ನು ಅತ್ಯಂತ ಭಕ್ತಿಯಿಂದ ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಕಂಬಳಿಯ ಬಳಕೆ ಅನಿವಾರ್ಯವೆಂಬಂತೆ ರೂಢಿಯಾಗಿದೆ.

ಕೂರಿಗೆ ಪೂಜೆಯಲ್ಲಿ ಪ್ರಾದೇಶಿಕವಾಗಿ ಅನೇಕ ಭಿನ್ನತೆಗಳಿವೆ. ಕೂರಿಗೆ ಪೂಜೆಯಲ್ಲಿ ಕರಿಕಟ್ಟಿದ ಕಂಬಳಿಯನ್ನು ಪೂರ್ವಾಭಿಮುಖವಾಗಿ ಅಥವಾ ಉತ್ತರಾಭಿಮುಖವಾಗಿ ಕರಿ ಮುಂದೆ ಬರುವಂತೆ ಹಾಸಿ ಅದರ ಮೇಲೆ ಕೂರಿಗೆಯನ್ನು ಕರಿ ಮುಂದೆ ಮಾಡಿದ ಕಡೆಗೆ ಮುಖ ಮಾಡಿ ಇಡುವರು. ಅದರ ಮೇಲೊಂದು ಕಣವನ್ನಿಟ್ಟು ಹೂವಿನ ಮಾಲೆ ಹಾಕಿ ವಿಭೂತಿ ಕುಂಕುಮ ಹಚ್ಚಿ ನೈವೇದ್ಯ ಹಿಡಿದು ಕಾಯಿ ಒಡೆಯುವರು. ಹೀಗೆ ಕೆಲವೆಡೆಯಲ್ಲಿ ಮನೆಯಲ್ಲಿಯೇ ಕೂರಿಗೆ ಪೂಜೆ ಮಾಡಿ ಅದನ್ನು ಹೆಗಲ ಮೇಲೆ ಹೊತ್ತುಕೊಂಡು ಹೊಲಕ್ಕೆ ಒಯ್ಯುವರು. ಹಾಗೆ ಹೊತ್ತೊಯ್ಯುವವರ ಹೆಗಲ ಮೇಲೆ ಕಡ್ಡಾಯವಾಗಿ ಕಂಬಳಿ ಇರಲೇಬೇಕು. ಮತ್ತೆ ಕೆಲವು ಕಡೆ ಹೊಲದಲ್ಲಿಯೇ ಕೂರಿಗೆ ಪೂಜೆ ಮಾಡುವರು. ಹಾಗೆ ಹೊಲದಲ್ಲಿ ಪೂಜೆ ಮಾಡುವಾಗಲೂ ಕೂರಿಗೆಯ ಕೆಳಗಡೆ ಕಂಬಳಿ ಹಾಸುವರು.[೨] ಹೀಗೆ ಕೂರಿಗೆ ಪೂಜೆಯಲ್ಲಿ ಬಳಕೆಯಾದ ನಂತರ ಕಂಬಳಿ ಬಳಕೆಗೊಳ್ಳುವ ಮತ್ತೊಂದು ಸಂದರ್ಭವೆಂದರೆ ರಾಶಿಬಾನ.

**ರಾಶಿಬಾನ:** ರಾಶಿಯ ಸಂದರ್ಭದಲ್ಲಿ ಕಣದಲ್ಲಿಯೇ ಮಾಡುವ ಊಟಕ್ಕೆ ತುಂಬ ಮಹತ್ವವಿದೆ. ರಾಶಿಬಾನವೆಂದು ಕರೆಸಿಕೊಳ್ಳುವ ಈ ಊಟವನ್ನು ಕಣದ ದಂಡೆಯ ಮೇಲೆ ಇಬ್ಬರಿಗೆ ಮಾಡಿಸಲಾಗುತ್ತದೆ. ರಾಶಿಬಾನಕ್ಕಾಗಿ ಹೊಸ ಧಾನ್ಯದಿಂದ ವಿಶೇಷವಾದ ಅಡಿಗೆ ಮಾಡಿ ಮಾಡಿದ್ದೆಲ್ಲವನ್ನೂ ಎರಡು ತಾಟಿಗೆ ಎಡೆ ಹಚ್ಚುವರು. ಒಂದು ಕಂಬಳಿಯ ಮೇಲೆ ಆ ಎರಡೂ ತಾಟುಗಳನ್ನಿಟ್ಟು ತಮಗೆ ಬೇಕಾದ ಯಾರಾದರೂ ಇಬ್ಬರನ್ನು ಆ ಕಂಬಳಿ ಮೇಲೆ ತಾಟಿನ ಎದುರು ಬದುರು ಕೂಡಿಸಿ ಕುಳಿತ ಅವರಿಬ್ಬರೂ ಮುಚ್ಚುವಂತೆ ಮತ್ತೊಂದು ಕಂಬಳಿಯನ್ನು ಹೊದಿಸಿ ನಾಲ್ಕೂ ಕಡೆಗೆ ಕಂಬಳಿಯ ತುದಿಯನ್ನು ಗಟ್ಟಿಯಾಗಿ ಹಿಡಿದಿರುತ್ತಾರೆ. ಕಂಬಳಿ ಹೊದಿಸಿದ ನಂತರ ಆ ಇಬ್ಬರೂ ಮಾತನಾಡದೇ ಉಣ್ಣಬೇಕು. ಇಟ್ಟ ಎಡೆಯಲ್ಲಿ ಸ್ವಲ್ಪವೂ ಉಳಿಸುವುದಾಗಲಿ, ಅವರು ಹಾಕಿದ್ದಕ್ಕಿಂತ ಹೆಚ್ಚಿಗೆ ಮತ್ತೆ ಕೇಳುವುದಾಗಲಿ ಎರಡೂ ನಿಷಿದ್ಧ. ಅವರು ಅಲ್ಲಿದ್ದದ್ದನ್ನಷ್ಟೇ ಉಳಿಸದೇ ಉಂಡು ಏಳಬೇಕು. ಊಟವಾದ ನಂತರದಲ್ಲಿ ಆ ಇಬ್ಬರೂ ಅನ್ನ ಅಕ್ಷಯವಾಗಲೆಂಬ ಆಶಯದಿಂದ ಮತ್ತೊಂದು ತಾಟಿನಲ್ಲಿ ಎಡೆ ತೆಗೆದುಕೊಂಡು ಹೊಲದ ತುಂಬೆಲ್ಲ 'ಹುಲುಲಿಗೋ' ಎನ್ನುತ್ತ ಸುತ್ತಲೂ ಅನ್ನವನ್ನು ಚೆಲ್ಲುವರು. ಕಂಬಳಿ ಮುಸುಕಿನಲ್ಲಿ ನಡೆಯುವ ಈ ರಾಶಿ ಊಟದ ಹಿಂದಿರುವ ಜನಪದರ ಆಶಯವನ್ನು ಈ ಮುಂದಿನಂತೆ ಅರ್ಥೈಸಬಹುದೆನ್ನಿಸುತ್ತದೆ: ರಾಶಿ ಮಾಡಿ ಕಣದಲ್ಲಿ ಹರಡಿರುವ ಈ ಅನ್ನ ಸಂಪತ್ತು ಒಂದೇ ಕಡೆಗೆ ಕೇಂದ್ರೀಕರಣಗೊಳ್ಳದೇ ಯಾರಿಗೂ ಕಡಿಮೆ ಯಾಗದಂತೆ, ಒಬ್ಬರಿಗೇ ಅತಿಯೂ ಆಗದಂತೆ ಎಲ್ಲರ ಹಸಿವು ಹಿಂಗುವಂತೆ ಎಲ್ಲೆಡೆಯೂ ಹಂಚಿಕೆಯಾಗಲಿ ಎಂಬ ಸದಾಶಯವನ್ನು ಈ ಆಚರಣೆಯಲ್ಲಿ ಕಾಣಬಹುದಾಗಿದೆ.

ಒಕ್ಕಲುತನಕ್ಕೆ ಸಂಬಂಧಿಸಿದಂತೆ ಕಂಬಳಿ ಬಳಕೆಗೊಳ್ಳುವ ಮತ್ತೊಂದು ಸಂದರ್ಭವೆಂದರೆ ರಾಶಿ ತುಂಬುವುದು. ಕಣದಲ್ಲಿರುವ ರಾಶಿಯನ್ನು ಚೀಲಕ್ಕೆ ತುಂಬುವಾಗ ರಾಶಿ ಅಳೆಯುವವನು ಮುಖಕ್ಕೆ ಕಂಬಳಿ ಮುಸುಕು ಹಾಕುವುದು ಸಂಪ್ರದಾಯ. ಹೀಗೆ ಕಂಬಳಿ ಮುಸುಕು ಹಾಕಿ ಧಾನ್ಯವನ್ನು ಅಳೆದು ಮತ್ತೊಂದು

ಕಂಬಳಿಗೆ ಸುರಿಯುವನು. ಅಲ್ಲಿಂದ ಇನ್ನೊಬ್ಬರು ಚೀಲಕ್ಕೆ ಹಾಕುವರು.[೨೯] ರಾಶಿಯನ್ನು ತುಂಬುವವ ಮುಖಕ್ಕೆ ಕಂಬಳಿ ಮುಸುಕು ಹಾಕಿರುವುದು ಬರೀ ಸಂಪ್ರದಾಯವಾಗಿರದೇ ಅಳೆಯುವಾಗ ಧಾನ್ಯದಲ್ಲಿನ ಸುಂಕು, ಧೂಳುಗಳಿಂದ ಅಳೆಯುವವನನ್ನು ರಕ್ಷಿಸುವುದಕ್ಕಾಗಿ ಜನಪದರು ಕಂಬಳಿಯನ್ನು ಸಂರಕ್ಷಣೆಯ ವಸ್ತುವಾಗಿ ಮುಸುಕು ಹಾಕುವರು. ಅಲ್ಲದೇ ಅಳೆದ ರಾಶಿಯನ್ನು ಮೊದಲು ಕಂಬಳಿಗೆ ಸುರಿಯಲು ಕಾರಣ ಧಾನ್ಯದಲ್ಲಿನ ಹೊಲಸು, ಧೂಳು ಕಂಬಳಿಯೊಳಗೆ ಸಿಕ್ಕಿಕೊಳ್ಳುವುದರಿಂದ ಇನ್ನೊಂದು ಚೀಲಕ್ಕೆ ಸುರಿದಾಗ ಧಾನ್ಯ ಮತ್ತಷ್ಟು ಹಸನಾಗುತ್ತವೆಯೆಂಬ ಬುದ್ಧಿವಂತಿಕೆ ಇದರ ಹಿಂದಿದೆ ಎನ್ನಿಸುತ್ತದೆ.

ಹೀಗೆ ಜನಸಾಮಾನ್ಯರು ತಮ್ಮ ಬದುಕಿನುದ್ದಕ್ಕೂ ಕಂಬಳಿ ವಿಷಯದಲ್ಲಿ ಆದರವನ್ನು ಬೆಳೆಯಿಸಿ ಕೊಂಡು ಅದರ ಸುತ್ತ ಅನೇಕ ಸಂಪ್ರದಾಯ-ಆಚರಣೆಗಳನ್ನು ಹೆಣೆದುಕೊಂಡು ಬಂದವರು. ಇತ್ತೀಚಿನ ದಿನಗಳಲ್ಲಿ ಒಕ್ಕಲುತನಕ್ಕೆ ಅನೇಕ ಆಧುನಿಕ ಆಯಾಮಗಳು ಸೇರಿಕೊಳ್ಳುತ್ತಿವೆ. ತತ್ಪರಿಣಾಮವಾಗಿ ಕಂಬಳಿಯ ಉಪಯೋಗ, ಸಂಪ್ರದಾಯ-ಆಚರಣೆಗಳು ಹಲವೆಡೆ ಮರೆಯಾಗುತ್ತಿವೆ. ಮೂಲ ಸ್ವರೂಪವೇ ಬದಲಾವಣೆಗೆ ಪಕ್ಕಾಗುತ್ತಿರುವ ಸಂದರ್ಭದಲ್ಲಿ ಕಂಬಳಿಯೊಂದಿಗಿನ ಆಂಶಿಕ ಸಂಬಂಧಗಳು ಕಳಚಿಕೊಳ್ಳುತ್ತಿದ್ದರೆ ಯಾರು ಏನೂ ಮಾಡುವ ಹಾಗಿಲ್ಲ. ಆದರೂ ಕಂಬಳಿಯ ವಿಷಯದಲ್ಲಿನ ಶ್ರದ್ಧೆ ಜಾನಪದರಲ್ಲಿ ಇನ್ನೂ ಉಳಿದಿದೆ ಎನ್ನುವುದಕ್ಕೆ ಇಂಥ ಸಂದರ್ಭಗಳು ನಿದರ್ಶನವಾಗುತ್ತವೆ.

**೩. ಜಾಡಿಯ ವಿಶೇಷತೆ**

ಜಾಡಿ ಮೂಲತಃ ಮರಾಠಿಯ 'ಝಾಡಿ' ಶಬ್ದದಿಂದ ಬಂದುದಾಗಿದೆ. ಜಾಡಿಗೆ ನಿಘಂಟುವಿನಲ್ಲಿ ಕಂಬಳಿ ಎಂಬರ್ಥವಿದೆ. ಆದರೆ ಕಂಬಳಿಗೆ ಇರುವ ವಿಶಾಲ ವ್ಯಾಪ್ತಿ ಜಾಡಿಗಿಲ್ಲ. ಜಾಡಿಗೆ ಸಾಮಾಜಿಕ ವಲಯಕ್ಕಿಂತ ಧಾರ್ಮಿಕ ವಲಯದಲ್ಲೇ ಹೆಚ್ಚು ಮಹತ್ವ, ಮನ್ನಣೆಯಿರುವುದು ಗಮನಾರ್ಹ. ಜಾಡಿಯೆನ್ನುವ ಪದವನ್ನು ಕಂಬಳಿಗೆ ಸಮಾನವಾಗಿಯೆನ್ನುವಂತೆ ಹಗುರಾಗಿ ಬಳಸುವುದು ರೂಢಿಯಲ್ಲಿ ಬಂದಿದೆ.

ಕುರುಬರಲ್ಲಿ ಒಡೆಯರು ಎಂಬ ಗುರುಪರಂಪರೆಯೊಂದಿದೆ. ಈ ಗುರು ಪರಂಪರೆಯಲ್ಲಿ ಪ್ರಮುಖ ವಾಗಿ ಮೂರು ಶಾಖೆಗಳಿವೆ.

೧. ಅಮೋಘಸಿದ್ಧೇಶ್ವರ ಪರಂಪರೆ

೨. ರೇವಣಸಿದ್ಧೇಶ್ವರ ಪರಂಪರೆ (ಸರೂರು ಶಾಂತಮುತ್ತಯ್ಯನ ಪರಂಪರೆ)

೩. ಸಿದ್ಧರಾಮೇಶ್ವರ ಪರಂಪರೆ (ಮಂಕಸಿದ್ಧ ಪರಂಪರೆ)

ಈ ಮೂರು ಪರಂಪರೆಗಳವರನ್ನು ಪ್ರತ್ಯೇಕವಾಗಿ ಗುರುತಿಸಲು ದೊರೆಯುವ ಮೊದಲ ಚಿಹ್ನೆಯೇ ಜಾಡಿ. ಜಾಡಿಗಳಲ್ಲಿ ಏಡುಗಳ ಸಂಖ್ಯೆ ಹಾಗೂ ಅವುಗಳನ್ನು ಹಾಕುವ ರೀತಿಯಲ್ಲಿ ಭಿನ್ನತೆಯನ್ನು ಕಾಣುತ್ತೇವೆ.

ಅಮೋಘಸಿದ್ಧ ಒಡೆಯ ಪರಂಪರೆಯವರ ಜಾಡಿಯ ಎರಡೂ ಬದಿಯಲ್ಲಿ ೩ ಏಡು ಒಂದು ಮುತ್ತೆಳಿ ಎರಡೂ ಕಡೆಗೆ ಸೆರಗು ಬರುತ್ತವೆ. ಇದನ್ನು 'ಈಬತ್ತಿ ಪಟ್ಟಿ' ಎಂತಲೂ ಕರೆಯುವರು. ಸರೂರು ಶಾಂತಮುತ್ತಯ್ಯನ ಪರಂಪರೆಯವರಿಗೆ ಬಸವಣ್ಣನೇ ಮೂರೇಣಿನ ಜಾಡಿಯನ್ನು ಕುರುಹಾಗಿ ಕೊಟ್ಟಿದುದಾಗಿ ತಗರ ಪವಾಡದಲ್ಲಿ ಉಲ್ಲೇಖ ಬರುತ್ತದೆ. ಸಿದ್ಧರಾಮೇಶ್ವರ ಪರಂಪರೆಯಲ್ಲಂತೂ ಶರಣ ಸಂಸ್ಕೃತಿಯ ಕುರುಹುಗಳೇ ಇವೆ. ಹೀಗೆ ಒಡೆಯರ ಜಾಡಿಗಳಿಗೆ ಏಡು ಹಾಕುವ ಸಂಪ್ರದಾಯ ರೂಢಿಗತವಾದದ್ದು ಮತ್ತು ಅದನ್ನು ಈಬತ್ತಿ ಪಟ್ಟಿ ಎಂದು ಕರೆಯುವುದನ್ನು ನೋಡಿದಾಗ ಒಡೆಯರ ಈ ರೂಢಿ ಭಂಡಾರ ಸಂಸ್ಕೃತಿಯಿಂದ ವಿಭೂತಿ ಸಂಸ್ಕೃತಿಯೆಡೆಗೆ ವಾಲಿದ್ದನ್ನು ಸಾಂಕೇತಿಸುತ್ತದೆ ಎನ್ನಿಸುತ್ತದೆ. ವಿಭೂತಿ ಶ್ರೇಷ್ಠ ಎಂಬ ಪರಿಕಲ್ಪನೆಯ ಕಾಲಘಟ್ಟದಲ್ಲಿ ಜನಾಂಗವೊಂದು ಟಿಸಿಲೊಡೆದು ಸಾಮಾಜಿಕ ಉನ್ನತೀಕರಣವನ್ನು ಪ್ರತಿಪಾದಿಸುತ್ತ ವಿಭೂತಿಯನ್ನು ಅಪ್ಪಿಕೊಂಡು ಗುರುಸ್ಥಾನವನ್ನು ಪಡೆದಿದೆ ಎನ್ನಿಸುತ್ತದೆ.

ಈ ಮೂರೂ ಗುರುಪರಂಪರೆಯ ಒಡೆಯರು ಯಾವುದೇ ಕಾರ್ಯಗಳಿಗೆ ಭಕ್ತರ ಮನೆಗೆ ಒಬ್ಬ ಗುರುವಾಗಿ ಹೋಗುವಾಗ ಕಡ್ಡಾಯವಾಗಿ ತಮ್ಮ ಗುರು ಪರಂಪರೆಯವರಿಗೆ ಸಂಕೇತವಾಗಿ ಬಂದಂತಹ ಜಾಡಿಯನ್ನೇ ಹೊದ್ದು ಹೋಗಬೇಕು ಎಂಬ ಸಂಪ್ರದಾಯ ಬೆಳೆದು ಬಂದಿದೆ.

ಜಾಡಿಯ ಈ ಸಂಪ್ರದಾಯ ಬರೇ ಗುರುಪರಂಪರೆಗೆ ಮಾತ್ರ ಸೀಮಿತವಾಗದೇ ದೈವಗಳಿಗೂ ವಿಸ್ತರಿಸಿಕೊಂಡಿದೆ. ಕೆಲವು ದೇವರುಗಳಿಗೆ ಇಂಥವೇ ಜಾಡಿಗಳು ಆಗಬೇಕೆಂಬ ನಿರ್ಬಂಧನೆಯಿದೆ. ಹೀಗೆ ಜಾಡಿಯ ಕುರಿತಾದ ನಿರ್ಬಂಧನೆ ಹೊಂದಿದ ದೇವರುಗಳು ಹೆಚ್ಚಾಗಿ ಕುರುಬರ ಕುಲದೈವಗಳೇ ಆಗಿವೆ ಎನ್ನುವುದು ವಿಶೇಷ.

ಬೀರದೇವರು, ಕರಿಸಿದ್ಧೇಶ್ವರ, ಮಾಳಿಂಗರಾಯ, ಮಾಯವ್ವ ಈ ದೇವರುಗಳಿಗೆ ಎರಡೂ ಬದಿಯಲ್ಲಿ ೨ ಏಡು ೧ ಮುತ್ತೆಳಿ ಇರಬೇಕೆಂಬ ನಿಯಮವಿದೆ. ಈ ದೇವರುಗಳಿಗೆ ಹಾಗೂ ಆ ದೇವರ ಪೂಜಾರಿಗಳಿಗೆ ಇದೇ ರೀತಿಯ ಜಾಡಿಯಾಗಬೇಕು.

ಕಡೋಲಿ ವಿಠ್ಠಲನಿಗೆ ಎರಡೂ ಕಡೆಗೆ ೨ ಏಡು ಮಾತ್ರ ಹಾಕಲಾಗುತ್ತದೆ.

ರೇವಣಸಿದ್ಧನಿಗೆ ೪೨ ಏಡುಗಳು ಅಂದರೆ ಎರಡೂ ಬದಿಯಲ್ಲಿ ೨೧, ೨೧ ಏಡುಗಳನ್ನು ಹಾಕಲಾಗುತ್ತದೆ.

ಅಲಕನೂರು ಕರಿಸಿದ್ಧನಿಗೆ ಒಂದು ಬದಿಯಲ್ಲಿ ಮಾತ್ರ ೨ ಏಡು ೧ ಮುತ್ತೆಳಿ ಇರುತ್ತದೆ.

ಬೀರದೇವರಿಗೆಂದೇ ನಿಗದಿಪಡಿಸಿದ ಜಾಡಿ ಇದೆಯಾದರೂ ಆ ದೇವರ ಈರಗಾರಿಕೆಯವರು ಮಾತ್ರ ತಮ್ಮನ್ನು ಪ್ರತ್ಯೇಕಿಸಿಕೊಳ್ಳಲು ತಮ್ಮದೇ ಆದ ಮತ್ತೊಂದು ರೀತಿಯ ಜಾಡಿಯನ್ನು ನೇಯಿಸಿಕೊಳ್ಳುವುದೂ ರೂಢಿಯಲ್ಲಿದೆ. ಅದಕ್ಕೆ ಹೈಗ ಕಂಬಳಿ ಎನ್ನುವರು. ಈ ಜಾಡಿಗೆ ಎರಡೂ ಕಡೆಗೆ ಎರಡೆರಡು ಏಡು ಹಾಕಿಸಿ

ನಡುವೆ ಒಂದೊಂದು ಮುತ್ತೆಳಿ ಹಾಕಿಸಿ ಮಧ್ಯದಲ್ಲಿ ಒಂದು ಚೋಟು ಕೆಂಪನೂಲ ಹಾಕಿಸುವರು. ಹೀಗೆ ಜಾಡಿ ನೇಯಿಸುವ ಈರಗಾರಿಕೆಯವರು ಬಿಜಾಪುರ ಜಿಲ್ಲೆಯ ಸಿಂದಗಿ ಹಾಗೂ ಅಕ್ಕಪಕ್ಕದ ಊರುಗಳಲ್ಲಿ ಇರುವರು.

ಇಷ್ಟೊಂದು ವೈವಿಧ್ಯತೆಯಿರುವ ಗುರುಪರಂಪರೆಯ ಜಾಡಿಗಳು ಹಾಗೂ ದೇವರ ಜಾಡಿಗಳನ್ನು ಸಾಮಾನ್ಯ ಕಂಬಳಿಯನ್ನು ನೇಯುವುದಕ್ಕಿಂತ ಭಿನ್ನವಾಗಿ ನೇಯುವುದಕ್ಕಾಗಿಯೇ ಅನೇಕ ಕಟ್ಟು ಪಾಡುಗಳನ್ನು ವಿಧಿಸಿಕೊಂಡು ನೇಯುವ ಸಂಪ್ರದಾಯವಿದೆ.

**ಜಾಡಿ ನೇಯುವವರು ಪಾಲಿಸಬೇಕಾದ ಕಟ್ಟುಪಾಡುಗಳು**

ದೇವರುಗಳಿಗೆ, ಗುರುಪರಂಪರೆಯವರಿಗೆ ಬೇಕಾದ ಜಾಡಿಗಳನ್ನು ನೇಯುವವರು ಅನೇಕ ನೇಮನಿತ್ಯಗಳನ್ನು ಪರಂಪರಾಗತವಾಗಿ ಪಾಲಿಸಿಕೊಂಡು ಬಂದಿರುವರು. ಈ ಜಾಡಿಯನ್ನು ನೇಯ್ದು ಕೊಡುವುದಾಗಿ ಒಪ್ಪಿಕೊಂಡ ಕಂಬಳಿ ನೇಕಾರ ಆ ಜಾಡಿ ನೇಯಲು ಪ್ರಾರಂಭಿಸುವ ಮೊದಲು ಮನೆ ತೊಳೆದು ಸ್ವಚ್ಛಗೊಳಿಸಿಕೊಳ್ಳುವನು. ಅನಂತರ ಒಂದು ಒಳ್ಳೆಯ ದಿನ ನೋಡಿ ನೇಯಲು ಪ್ರಾರಂಭಿಸುವನು. ಜಾಡಿ ನೇಯಲು ಪ್ರಾರಂಭಿಸಿದ ದಿನದಿಂದ ಅದು ಪೂರ್ಣಗೊಳ್ಳುವವರೆಗೂ ಮಡಿಯಿಂದಲೇ ನೇಯಬೇಕು. ನೇಯುತ್ತಿರುವಾಗ ಯಾವುದೇ ಕಾರಣಕ್ಕೂ ಮಗ್ಗದಿಂದ ಎದ್ದರೆ ಮತ್ತೆ ಸ್ನಾನ ಮಾಡಿಯೇ ಮಗ್ಗದಲ್ಲಿ ಕಾಲಿಡುವುದು ಸಂಪ್ರದಾಯ. ನೇಯುವಾಗ ಮಗ್ಗಕ್ಕೆ ಯಾರೂ ಕಾಲುಬಡಿಸಬಾರದೆಂಬ ಪೂಜ್ಯತೆಯನ್ನು ಈ ಕಂಬಳಿ ನೇಕಾರರು ಇಂದಿಗೂ ಕಾಯ್ದುಕೊಂಡು ಬಂದಿರುವರು. ಹೀಗೆ ದೇವರು, ಗುರುಗಳ ಹಾಗೂ ಪೂಜಾರಿಗಳ ಈ ಜಾಡಿ ನೇಯುವವರಿಗಷ್ಟೇ ಅಲ್ಲ ಆ ದೇವರುಗಳನ್ನು, ಗುರುಗಳನ್ನು ನಂಬುವ ಎಲ್ಲರಿಗೂ ಅವೇ ಪ್ರತ್ಯಕ್ಷ ದೈವಗಳು ಎನ್ನುವಷ್ಟರ ಮಟ್ಟಿಗೆ ಜಾಡಿಯೆಂದರೆ ಎಲ್ಲರಿಗೂ ಭಯ, ಭಕ್ತಿ.

ಜಾಡಿಯ ಮಹತ್ವದ ಕುರಿತಾಗಿ ಹೇಳುವಾಗ ಬಾಗಲಕೋಟ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಕೊಣ್ಣೂರಿನ ಕರಿಸಿದ್ಧೇಶ್ವರ ದೇವಸ್ಥಾನದಲ್ಲಿ ನಡೆದ ಘಟನೆಯೊಂದನ್ನು ಅಲ್ಲಿಯ ಪೂಜಾರಿಗಳು ಹೇಳುವುದು ಹೀಗೆ. ಕೊಣ್ಣೂರಿನ ಕರಿಸಿದ್ಧೇಶ್ವರ ದೇವಸ್ಥಾನದಲ್ಲಿನ ಜಾಡಿಯನ್ನು ಜಾಡಿಯ ಮಹತ್ವ ತಿಳಿಯದ ಒಬ್ಬ ಭಕ್ತ, ಸಾಮಾನ್ಯ ಕಂಬಳಿಯೆಂದು ಬಗೆದು ಗುಡಿಯಲ್ಲಿದ್ದುದನ್ನು ತಾನೇ ತೆಗೆದುಕೊಂಡು ಹೋದ. ಹಾಗೆ ಜಾಡಿಯನ್ನು ತೆಗೆದುಕೊಂಡು ಹೋದಂದಿನಿಂದ ಅವನಿಗೆ, ಅವನ ಮನೆಯವರಿಗೆ ಒಂದಲ್ಲ ಒಂದು ಸಂಕಷ್ಟ ಎದುರಾಗತೊಡಗಿತಂತೆ. ಕೆಲವು ದಿನಗಳ ನಂತರ ತನ್ನ ತಪ್ಪಿನ ಅರಿವಾಗಿ ತಪ್ಪೊಪ್ಪಿಗೆಯ ರೂಪದಲ್ಲಿ ಇದೇ ದೇವರಿಗೆ ಐದು ಜಾಡಿ ನೇಯಿಸಿ ತಂದುಕೊಟ್ಟನಂತೆ[೨೧] ಈ ಘಟನೆಯನ್ನು ಹೇಳುತ್ತ ಅಲ್ಲಿನ ಹಿರಿಯರೆಲ್ಲ ಜಾಡಿಯ ಮಹಿಮೆ ಕುರಿತಾದ ಇಂಥ ಅನೇಕ ಘಟನೆಗಳನ್ನು ನೆನಪಿಸಿಕೊಳ್ಳುತ್ತಾರೆ.

ಜಾಡಿಯಲ್ಲಿ ಅನೇಕ ವೈವಿಧ್ಯತೆಗಳಿದ್ದೂ ಅವೆಲ್ಲವೂ ದೇವರ ಕಂಬಳಿಗಳೆಂದು ಹಾಲುಮತ ಸಂಸ್ಕೃತಿಯಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿ ಜನಮನದಲ್ಲಿ ಇಂದಿಗೂ ಪೂಜ್ಯ ಭಾವವನ್ನು

ಉಳಿಸಿಕೊಂಡು ಬಂದಿವೆ. ಇಂಥ ಒಂದು ನಂಬಿಕೆಯನ್ನು, ವಿಶಿಷ್ಟ ಸಂಸ್ಕೃತಿಯನ್ನು ತಲೆತಲಾಂತರದಿಂದ ಅತ್ಯಂತ ಶ್ರದ್ಧೆ ಭಕ್ತಿಗಳಿಂದ ಮುಂದುವರಿಸಿಕೊಂಡು ಬಂದಿರುವ ಹಾಲುಮತದ ಜನರ ಮನಃಸ್ಥಿತಿಯನ್ನೂ ಇದು ಹೇಳುತ್ತದೆ. ಎಂಥ ಸಾಂಸ್ಕೃತಿಕ ಸಂಘರ್ಷಕ್ಕೂ ಮಣಿಯದ ಹಾಲುಮತದ ಜನಾಂಗದ ಕಥೆಯನ್ನು ತಗರ ಪವಾಡ, ಸಿದ್ಧಮಂಕ ಚರಿತೆಯಂಥ ಕಾವ್ಯಗಳಲ್ಲಿ ಓದಿ ತಿಳಿದಂಥ ನಮಗೆ ಪ್ರಸ್ತುತ ಇಂಥ ಜಾಗತೀಕರಣದ ಸಂದರ್ಭದಲ್ಲೂ ಯಾವುದೇ ಆಧುನಿಕತೆ ಅವರ ಜಾಡಿಗಳಿಗೆ ತಟ್ಟಿಲ್ಲವೆನ್ನುವುದನ್ನು ನೋಡಿದಾಗ ಅವು ಬರೀ ಉತ್ಪ್ರೇಕ್ಷೆಯ ಕಥೆಗಳಲ್ಲ. ಕೆಲಮಟ್ಟಿನ ವಾಸ್ತವತೆಯನ್ನು ಹೊಂದಿರಬಹುದೆಂದು ಮನವರಿಕೆಯಾಗುತ್ತದೆ.

### ೪. ಕಂಥೆ ಸೇವೆ

ಕಂಥೆ ಸೇವೆಯೆನ್ನುವುದು ಅಚ್ಚ ಕರಿಯ ಉಣ್ಣೆಯಿಂದ ತಯಾರಿಸಿದ ಕಂಬಳಿಯನ್ನು ಕುರುಬರು ತಮ್ಮ ಕುಲಗುರುವಾದ ರೇವಣಸಿದ್ಧೇಶ್ವರರಿಗೆ ಅರ್ಪಿಸುವ ಒಂದು ಪವಿತ್ರ ಕಾರ್ಯ. ಕಂಥಾಧಾರಣ ಸೇವೆ ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಆಚರಣೆ. ಕಂಥೆ ಸೇವೆಯಲ್ಲಿ ಅರ್ಪಿಸುವ ಈ ಕಂಥೆಯ ತಯಾರಿ ಕಂಬಳಿಗಿಂತ ತುಂಬ ಭಿನ್ನವಾಗಿ ನಡೆಯುತ್ತದೆ. ಇಲ್ಲಿಯ ಉಣ್ಣೆಯ ಸಂಗ್ರಹಣೆ, ಕಂಥೆಯ ನೇಯ್ಗೆ, ಕಂಥಾ ಧಾರಣಗಳಲ್ಲೆಲ್ಲ ಕಾಣುವ ವಿಶೇಷತೆಯನ್ನು ಈ ಮುಂದೆ ನೋಡಬಹುದು.

ಕಂಥೆಗೆ ಬೇಕಾದ ಉಣ್ಣೆಯನ್ನು ಎರಡು ವಿಧದಲ್ಲಿ ಸಂಗ್ರಹಿಸಲಾಗುತ್ತದೆ. ೧. ಕುರಿಹಟ್ಟಿಯಲ್ಲಿಯ ಅಚ್ಚ ಕರಿಯ ಕುರಿಮರಿಗಳನ್ನು ಆಯ್ದುಕೊಂಡು ಅವುಗಳಿಗೆ ರೇವಣಸಿದ್ಧೇಶ್ವರ ತೀರ್ಥ ಸಿಂಪಡಿಸಿ ವಿಭೂತಿ ಬಿಲ್ವಪತ್ರೆಗಳನ್ನು ಏರಿಸಿದರೆ ಅವು ಕಂಥೆ ಮರಿಗಳೆಂದು ನಿರ್ಧರಿತವಾಗುತ್ತವೆ. ಹೀಗೆ ನಿರ್ಧರಿತವಾದ ದಿನದಿಂದ ಈ ಮರಿಗಳ ಉಣ್ಣೆ ಮೊದಲ ಬಾರಿ ಕೊಯ್ಲಿಗೆ ಬರುವವರೆಗೂ ಅವು ಮೈಲಿಗೆಯಾಗದಂತೆ ಎಚ್ಚರಿಕೆ ವಹಿಸಬೇಕಾದುದು ಕುರಿಗಾರನ ಜವಾಬ್ದಾರಿಯಾಗುತ್ತದೆ. ಕೊಯ್ಲಿಗೆ ಬಂದನಂತರ ಅನೇಕ ಆಚರಣೆಗಳ ಮೂಲಕ ಈ ಉಣ್ಣೆಯನ್ನು ಕತ್ತರಿಸುವ ಕಾರ್ಯ ರೇವಣಸಿದ್ಧೇಶ್ವರ ಮಠದವರಿಂದ ನಡೆಯುತ್ತದೆ. ೨. ಮಠದ ಒಡೆಯರಾದಿಯಾಗಿ ಕುರಿದೊಡ್ಡಿಗೆ ಹೋಗಿ ಅಲ್ಲಿ ಒಂದು ಕರಿಯ ಕಂಬಳಿಯ ಮೇಲೆ ಗುರು ರೇವಣಸಿದ್ಧೇಶ್ವರರ ಪ್ರಸಾದವನ್ನು ಹಾಕುತ್ತಾರೆ. ನಂತರ ಆಯ್ದ ಅಚ್ಚಕರಿಯ ಮರಿಗುರಿಗಳನ್ನು ತಂದು ಆ ಕಂಬಳಿಯ ಹತ್ತಿರ ಬಿಡುವರು. ಯಾವ ಮರಿಗಳು ಕಂಬಳಿಯ ಮೇಲಿನ ಆ ಪ್ರಸಾದವನ್ನು ತಿನ್ನುತ್ತವೆಯೋ ಅವುಗಳಿಗೆ ಮಾತ್ರ ಪವಿತ್ರ ಜಲವನ್ನು ಪ್ರೋಕ್ಷಿಸಿ ವಿಭೂತಿ, ಬಿಲ್ವಪತ್ರೆಗಳನ್ನು ಏರಿಸಿ ಆ ಮರಿಗುರಿಗಳನ್ನು ಕಂಥೆಯ ಮರಿಗಳೆಂದು ನಿರ್ಧರಿಸುತ್ತಾರೆ. ಮರಿಗಳು ಚೆನ್ನಾಗಿ ಬೆಳೆದು ಮೊದಲ ಬಾರಿಗೆ ಕೊಯ್ಲಿಗೆ ಬರುವವರೆಗೆ ಅವುಗಳನ್ನು ಮೈಲಿಗೆಯಾಗದಂತೆ ಜೋಪಾನವಾಗಿ ಕಾಪಾಡುತ್ತಾರೆ. ಕಂಥೆ ಮರಿಗಳೆಂದು ನಿರ್ಧರಿತವಾದ ಮರಿಗಳು ಬೆಳೆದು ಉಣ್ಣೆಕೊಯ್ಲಿಗೆ ಬಂದ ನಂತರ ಅತ್ಯಂತ ಶ್ರದ್ಧಾ, ಭಕ್ತಿ, ಮಡಿಯ ಆಚರಣೆಗಳಿಂದ ವಿಶೇಷ ರೀತಿಯಲ್ಲಿ ಉಣ್ಣೆಯ ಸಂಗ್ರಹಣೆ ನಡೆಯುತ್ತದೆ. ಹೀಗೆ ಸಂಗ್ರಹಿಸಿದ ಉಣ್ಣೆಯನ್ನು ಒಂದು ಚೀಲದಲ್ಲಿ ತುಂಬಿ ಪೂಜಿಸುವರು. ಪೂಜೆಯ ನಂತರ ಆ ಸ್ಥಳದಿಂದ ಹೊರಟು ದಾರಿಯಲ್ಲಿ ಯಾವುದೇ ಮೈಲಿಗೆಯಾಗದಂತೆ

ಎಚ್ಚರದಿಂದ ಮಠವಿರುವ ತಮ್ಮ ಊರಿನ ಹೊರಭಾಗಕ್ಕೆ ಬರುವರು. ತಡರಾತ್ರಿಯಾಗಿ ಊರ ಜನಸಂಚಾರವೆಲ್ಲ ನಿಂತ ಮೇಲೆ ದೀವಟಿಗೆ ಬೆಳಕಿನೊಂದಿಗೆ ಮಠಕ್ಕ ಬಂದು ಉಣ್ಣೆ ಮೂಟೆಯನ್ನು ರೇವಣಸಿದ್ದೇಶ್ವರ ಗದ್ದುಗೆಯ ಮೇಲೆ ಇಟ್ಟು ಮತ್ತೆ ಪೂಜೆ ಸಲ್ಲಿಸುವರು.

ಚೀಲದಲ್ಲಿ ತುಂಬಿರುವ ಉಣ್ಣೆಯನ್ನು ಹೊರಗೆ ತೆಗೆಯುವವರು ಹಾಗೂ ಕಂಥೆ ನೇಯುವವರು ತಮ್ಮ ತಮ್ಮ ಕೆಲಸ ಮುಗಿಯುವವರೆಗೆ ನೆನೆಹಾಕಿದ ಮೊಳಕೆ ಬಂದ ಹೆಸರು ಕಾಳಿನ ಉಪಹಾರವನ್ನು ಹಾಗೂ ಎಳೆನೀರನ್ನು ಮಾತ್ರ ಸೇವಿಸುವುದು ಸಂಪ್ರದಾಯ. ಇಷ್ಟನ್ನಲ್ಲದೇ ಬೇರೆ ಯಾವುದೇ ಆಹಾರವನ್ನಿವರು ತೆಗೆದುಕೊಳ್ಳುವಂತಿಲ್ಲ. ನಾಲ್ಕು ಜನ ಒಡೆಯರು ತಲೆ ಬೋಳಿಸಿಕೊಂಡು ಅತ್ಯಂತ ಮಡಿ ಹಾಗೂ ಕಠಿಣ ವ್ರತದಿಂದ ಯಾರಿಗೂ ಕಾಣದಂತೆ ಗರ್ಭಗುಡಿಯ ಒಳಗೇ ಕಂಥೆ ನೇಯುವರು. ಕಂಥೆ ನೇಯ್ಗೆ ಮುಗಿಯುವ ವರೆಗೆ ಮಗ್ಗದ ಮನೆಯಿಂದ ಯಾವುದೇ ಕಾರಣಕ್ಕೆ ಹೊರಗೆ ಬಂದರೂ ಮತ್ತೆ ಸ್ನಾನ ಮಾಡಿಕೊಂಡೇ ಒಳ ಹೋಗಬೇಕು. ನೇಯುವಾಗ ನೇಯುವವರ ಕಾಲು ಕಂಥೆಗೆ ತಟ್ಟದಂತೆ ತುಂಬ ನಿಗಾ ವಹಿಸಲಾಗುತ್ತದೆ.

ಕಂಥೆ ನೇಯ್ಗೆಗೆ ಕಂಬಳಿ ನೇಯಲು ಬಳಸುವ ಉಪಕರಣಗಳನ್ನು ಬಳಸದೇ ಕೈಯಿಂದಲೇ ನೇಯುವರು. ಕೈಯಿಂದಲೇ ಉಣ್ಣೆಯನ್ನು ಹಿಂಜಿ ಹಂಜಿ ಮಾಡಿ ತೊಡೆಗದಿರಿನ ಮೇಲೆ ನೂಲು ತೆಗೆದು ಸಣ್ಣ ಬಿದಿರಿನ ಕಡ್ಡಿಗಳಿಂದ ಮಗ್ಗ ತಯಾರಿಸಿಕೊಂಡು ನಾಲ್ಕು ಜನ ಒಡೆಯರು ಸೇರಿ ತಮ್ಮ ಕೈಯ ಬೆರಳುಗಳ ನಡುವೆ ಅಣಿಯಿಟ್ಟು ಕಂಥೆ ನೇಯುವರು. ನೇಯುವ ಈ ವಸ್ತ್ರ ಒಂದೂವರೆ ಗೇಣು ಉದ್ದ ಒಂದು ಗೇಣು ಅಗಲ ವಿರುತ್ತದೆ.

ಕಂಥೆ ಒಮ್ಮೆ ಸಿದ್ಧವಾದರೆ ಮುಂದಿನ ಹಂತವೇ ಕಂಥಾಧಾರಣ. ರೇವಣಸಿದ್ದೇಶ್ವರನಿಗಾಗಿ ಸಿದ್ಧವಾದ ಹೊಸ ಕಂಥೆಯನ್ನು ಅರ್ಪಿಸುವ ಪೂರ್ವದಲ್ಲಿ ಗಂಗಾಸ್ನಾನ, ಪಲ್ಲಕ್ಕಿಗಳ ಮೆರವಣಿಗೆ ನಡೆಯುತ್ತದೆ. ಅಲ್ಲದೇ ಕಂಥೆಯನ್ನು ಮಡಿ ಮಾಡಲು ಗಂಗೆಯ ತಟದಲ್ಲಿಯೇ ಹೊಸ ಬಾವಿಯೊಂದನ್ನು ತೋಡುವರು. ಯಾರಿಗೂ ಕಾಣದಂತೆ ತೆರೆಯ ಮರೆಯಲ್ಲಿಯೇ ರೇವಣಸಿದ್ದೇಶ್ವರರ ಮೂರ್ತಿ ಪೂಜೆ ನಡೆಯುವುದು. ಅದರೊಂದಿಗೆ ಅಲ್ಲಿಯೇ ಗುರುಕಲಶವನ್ನು ಹೂಡುವುದರಲ್ಲಿ ಮುಂದೆ ನಡೆಯುವ ಕಾರ್ಯಗಳಿಗೆಲ್ಲ ಗುರುವನ್ನು ಸಾಕ್ಷೀಕರಿಸಿಕೊಳ್ಳುವ ಮನೋಭಾವ ಕಾಣುತ್ತೇವೆ. ಇಷ್ಟು ಪೂಜೆಯ ನಂತರ ಹೊಸದಾಗಿ ಸಿದ್ಧವಾದ ಕಂಥೆಯನ್ನು ಆಗತಾನೇ ತೋಡಿರುವ ಭಾವಿಯ ನೀರಿನಿಂದಲೇ ಗಂಜಿಹೋಗುವಂತೆ ತೊಳೆದು ಸ್ವಚ್ಛಗೊಳಿಸಿ ಗುರುಗಳ ಕೈಯಲ್ಲಿ ಕೊಟ್ಟನಂತರ ಮತ್ತೊಮ್ಮೆ ಅದೇ ಬಾವಿಯ ನೀರಿನಿಂದ ಗುರುಗಳು ಆ ಕಂಥೆಯನ್ನು ತೊಳೆದಾಗ ಕಂಥೆ ಪವಿತ್ರವಾಗಿ ರೇವಣಸಿದ್ದೇಶ್ವರರಿಗೆ ಅರ್ಪಿತವಾಗಲು ಅರ್ಹವಾಗುತ್ತದೆ. ಅನಂತರ ಹೊರಗಿನ ಯಾರಿಗೂ ಕಾಣದಂತೆ ನಿಶ್ಚಿತಪಡಿಸಿದ ಬ್ರಾಹ್ಮೀ ಮುಹೂರ್ತದಲ್ಲಿ ಹೊಸ ಕಂಥೆಯನ್ನು ಧಾರಣ ಮಾಡುವರು. ಹೀಗೆ ಅತ್ಯಂತ ಸಡಗರ ಶ್ರದ್ಧಾಭಕ್ತಿಗಳಿಂದ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ, ಹಂದನಕೆರೆ, ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲೂಕಿನ ಶ್ರೀರಾಮಪುರಗಳಲ್ಲಿ ರೇವಣಸಿದ್ದೇಶ್ವರನಿಗೆ ಪ್ರತಿ ಹನ್ನೆರಡು

ವರ್ಷಕ್ಕೊಮ್ಮೆ ಕಂಥೆ ಅರ್ಪಿಸುವ ರೂಢಿ ಇಂದಿಗೂ ನಿಯಮಿತವಾಗಿ ನಡೆದುಕೊಂಡು ಬಂದಿರುವುದಾಗಿ ತಿಳಿಯುತ್ತದೆ.

ಹೀಗೆ ಕಂಬಳಿಯ ಒಂದು ವಿಶಿಷ್ಟ ಬಗೆಯಾದ ಕಂಥೆ ಜನಪದರ ಭಾವ ಜಗತ್ತಿನ ಧಾರ್ಮಿಕ ಆಚರಣೆಯ ರೂಪದಲ್ಲಿ ಕಂಥೆ ಸೇವೆಯಾಗಿ ಪ್ರಕಟಗೊಳ್ಳುತ್ತದೆ.**

ಮನುಷ್ಯ ತಾನು ಏನು ನಂಬುತ್ತಾನೋ ಅದನ್ನು ತಾನು ನಂಬಿರುವ ದೈವಕ್ಕೂ ಆರೋಪಿಸುತ್ತಾನೆ. ಜನಸಾಮಾನ್ಯರ ಪೂಜಾರಿಗಳ ಕಂಬಳಿ ಕುರಿತಾದ ಶ್ರದ್ಧಾಭಕ್ತಿಗಳು ಕಂಥಾ ಧಾರಣ ಸೇವೆಯಲ್ಲಿ ಹೆಚ್ಚು ನಿಖರವಾಗಿರುವುದನ್ನು ಮನಗಾಣಬಹುದು. ಕಂಬಳಿಗೆ ಮೈಲಿಗೆ ಇಲ್ಲವೆಂಬುದು ಜನಪದರದೇ ನಂಬಿಕೆಯಾದರೂ ತಾನು ನಂಬಿದ ದೈವಕ್ಕೆ ಅರ್ಪಿಸುವ ವಸ್ತುತನ್ನ ಕೈಲಾದಷ್ಟು ಪವಿತ್ರವಾದುದಾಗಿರ ಬೇಕೆಂಬುದು ಮನುಷ್ಯ ಸಹಜ ಅಭಿಲಾಷೆ. ಹಾಗಾಗಿಯೇ ಮರಿಗುರಿಗಳ ಉಣ್ಣೆಯಿಂದ ಸಿದ್ಧಗೊಳ್ಳುವ ಈ ಕಂಥೆಯ ಸಂಪ್ರದಾಯದ ಹಿಂದೆ 'ಮಕ್ಕಳಿಗೆ ಮೈಲಿಗೆ ಇಲ್ಲ' ಎನ್ನುವ ಜನಪದರ ಇನ್ನೊಂದು ನಂಬಿಕೆ ಹಿನ್ನೆಲೆಯಾಗಿ ಕೆಲಸ ಮಾಡುತ್ತದೆ. ಅಂತೆಯೇ ತಮ್ಮ ಅಧಿದೈವಕ್ಕೆ ಮಕ್ಕಳ ಸ್ವರೂಪವಾದ ಮರಿಗುರಿಗಳ ತುಪ್ಪಳದಿಂದ ಮಾಡಿದ ಕಂಥೆಯನ್ನು ಅರ್ಪಿಸುವ ಮುಖೇನ ಪಾವಿತ್ರ್ಯ ಕಾಯ್ದುಕೊಂಡು ಬಂದ ಮನೋಭಾವದೊಂದಿಗೆ ಕೃತಾರ್ಥರಾಗುತ್ತಾರೆ.

**೫. ಕೆಲವು ವಿಶೇಷ ಸಂದರ್ಭಗಳು**

ಮೇಲಿನ ನಾಲ್ಕೂ ವಿಭಾಗಗಳಲ್ಲಿ ಸೇರಿಸಲಾಗದ ಅಂಶಗಳನ್ನು ಒಂದೆಡೆ ಕ್ರೋಢೀಕರಿಸಿ ಈ ವಿಭಾಗದಲ್ಲಿ ಹೇಳಲಾಗಿದೆ.

ಈ ವಿಭಾಗದಲ್ಲಿ ಹೇಳಲೇಬೇಕಾದ ಮುಖ್ಯವಾದ ಅಂಶವೆಂದರೆ ವಗ್ಗಯ್ಯಗಳ 'ಕಂಬಳಿ ನಿಲುವಂಗಿ' ಕುರಿತಾದುದು. ಮೇಲೆ ನೋಡಿದ ಬಹುತೇಕ ಸಂದರ್ಭಗಳಲ್ಲಿ ಕಂಬಳಿ ಹಾಸುವ ಪೀಠ ರೂಪದ ಪೂಜ್ಯ ವಸ್ತುವಾಗಿ ಗೋಚರಿಸಿದೆ. ಆದರೆ ಇಲ್ಲಿ ಬರುವ ವಗ್ಗಯ್ಯಗಳ ಈ ಕಂಬಳಿ ನಿಲುವಂಗಿ ಕಂಬಳಿಯನ್ನೇ ವ್ಯವಸ್ಥಿತವಾಗಿ ಕತ್ತರಿಸಿ ಹೊಲಿದು ಸಿದ್ಧಪಡಿಸಿದ ಅಂಗಿಯಾಗಿದೆ. ಇದು ಮೈಲಾರಲಿಂಗನ ಭಕ್ತರಾದ, ಪರಂಪರಾಗತವಾಗಿ ವಗ್ಗಯ್ಯಗಳ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವವರು ಮಾತ್ರ ಧರಿಸುವ ನಿಲುವಂಗಿ. ಭಕ್ತರ ಮನೆಗೆ ಭಿಕ್ಷೆಗೆ ಹೋಗುವಾಗ ಯಾವಾಗಲೂ ವಗ್ಗಯ್ಯಗಳು ಈ ನಿಲುವಂಗಿಯನ್ನು ಹಾಕಿಕೊಂಡೇ ಹೋಗಬೇಕೆಂಬ ಸಂಪ್ರದಾಯವಿದೆ.

ಈ ನಿಲುವಂಗಿಯನ್ನು ಹೆಣ್ಣು ಗಂಡೆಂಬ ಲಿಂಗಭೇದವಿಲ್ಲದೆ ಇಬ್ಬರೂ ಧರಿಸಬಹುದಾಗಿರುವುದು ಇದರ ವಿಶೇಷತೆ.[೫೫] ಕೋಟಿನ ಆಕಾರದಲ್ಲಿರುವ ಈ ಅಂಗಿಗೆ ಉದ್ದನೆಯ ತೋಳುಗಳಿದ್ದು ಆ ತೋಳುಗಳಿಗೆ ಗೊಂಡೆಗಳನ್ನು ಹಚ್ಚಿ ಅಲಂಕರಿಸಿರುತ್ತಾರೆ. ಕಂಬಳಿ ಹೊದೆಯುವ ವಸ್ತ್ರವಾಗಿಯೇ ಬಹಳಷ್ಟು ಬಳಕೆಯಲ್ಲಿ ರುವಾಗ ಈ ನಿಲುವಂಗಿ ರೂಢಿಗೆ ಬಂದಿರುವುದಕ್ಕೆ ಈ ತೆರನಾದ ಕಾರಣವನ್ನು ಕಂಡುಕೊಳ್ಳಬಹುದೆನ್ನಿಸುತ್ತದೆ.

ವರ್ಗಯ್ಯಗಳ ಬದುಕು ಒಂದು ತೆರನಾದ ಅಲೆಮಾರಿ ಜೀವನವಿದ್ದಂತೆ. ಇಷ್ಟೊಂದು ಸಂಚಾರದ ಸಂದರ್ಭದಲ್ಲಿ ಕಂಬಳಿಯನ್ನು ಹೊದೆದುಕೊಳ್ಳುವುದು ಅಡಚಣೆಯೆನ್ನುವ ಕಾರಣಕ್ಕೆ ಮೊದಲು ಅದು ಹೆಗಲ ಮೇಲಿಂದ ಬೀಳದಂತೆ ಸ್ವಲ್ಪ ಹೊಲಿದುಕೊಂಡು ಹಾಕಿಕೊಳ್ಳುತ್ತಿದ್ದು ಕಾಲಾಂತರದಲ್ಲಿ ವ್ಯವಸ್ಥಿತ ಸಿಲುವಂಗಿ ಯಾಗಿಯೇ ಸಂಪ್ರದಾಯವಾಗಿರಬಹುದಾಗಿದೆ.

ಇದಿಷ್ಟೇ ಅಲ್ಲದೆ ಪಲ್ಲಕಿಗಳ ಮೇಲೆ ಅದರಲ್ಲೂ ವಿಶೇಷವಾಗಿ ಹಾಲುಮತದ ಕುಲದೈವಗಳ ಪಲ್ಲಕಿಯ ಮೇಲೆ, ದೇವಸ್ಥಾನದ ಸದರಗಟ್ಟೆಯ ಮೇಲೆ ಕಂಬಳಿಯ ಬಳಕೆ ಕಡ್ಡಾಯವಾಗುತ್ತದೆ.

ಕೆಲವೊಂದು ಕಡೆಗೆ ಮುತ್ತೈದೆಯರು ಮತ್ತೊಂದು ಮನೆಗೆ ಮುತ್ತೈದೆತನಕ್ಕೆ ಹೋಗುವಾಗ ಕಂಬಳಿ ಮುಸುಕು ಹಾಕಿಕೊಂಡೇ ಹೋಗುವುದು ಇಂದಿಗೂ ರೂಢಿಯಲ್ಲಿದೆ.

ಇಷ್ಟೆಲ್ಲದರ ನಂತರದಲ್ಲಿ ಬದುಕಿನ ಕೊನೆಯ ಸಂಸ್ಕಾರವಾದ ಅಂತ್ಯ ಸಂಸ್ಕಾರದಲ್ಲಿಯೂ ಕಂಬಳಿ ಸಂಪ್ರದಾಯವೆನ್ನುವಂತೆ ಕೆಲವು ಕಡೆಗೆ ಬಳಕೆಗೊಳ್ಳುವುದು ಆಶ್ಚರ್ಯವನ್ನುಂಟು ಮಾಡುತ್ತದೆ. ಬಾಗಲಕೋಟ ಜಿಲ್ಲೆಯ ಬಾಡಗಿ, ಹಂಚನಾಳ ಭಾಗದಲ್ಲಿ ಇತ್ತೀಚಿನವರೆಗೂ ಶವವನ್ನು ಕಂಬಳಿಯಲ್ಲಿ ಹಾಕಿ ಗಳಕ್ಕೆ ಕಟ್ಟಿಯೇ ಒಯ್ಯುವ ಸಂಪ್ರದಾಯ ರೂಢಿಯಲ್ಲಿತ್ತೆಂದು ತಿಳಿದು ಬರುತ್ತದೆ.[೯] ಆದರೆ ಇತ್ತೀಚೆಗೆ ಬಂದಿರುವ ಆಧುನಿಕ ಸಲಕರಣೆಗಳು ಈ ಸಾಂಪ್ರದಾಯಿಕ ಪದ್ಧತಿಯನ್ನು ಮರೆಮಾಚಿರುವುದಾಗಿ ಹೇಳುತ್ತಾರೆ.

ಹೀಗೆ ಹುಟ್ಟಿನಿಂದ ಆರಂಭಗೊಳ್ಳುವ ಕಂಬಳಿಯೊಂದಿಗಿನ ಮನುಷ್ಯನ ನಂಟು ಬದುಕಿನ ಅಂತ್ಯದವರೆಗೂ ನಿರಂತರವಾಗಿ ಬೆಸೆದುಕೊಂಡೇ ಇರುತ್ತದೆ. ಈ ಬೆಸುಗೆಗೆ ಮೂಲ ಕಾರಣ ಕಂಬಳಿಯ ಗುಣಧರ್ಮ ಒಂದು ಕಡೆಗಿದ್ದರೆ, ಮನುಷ್ಯ ಅದರೊಂದಿಗೆ ಬೆಳೆಸಿಕೊಂಡ ಅವಿನಾಭಾವ ಸಂಬಂಧ ಇನ್ನೊಂದು ಕಡೆಗೆ ಕಾರಣವಾಗುತ್ತದೆ.

## II. ನಂಬಿಕೆಗಳು

ನಂಬಿಕೆಗಳು ಹುಟ್ಟುವಾಗ ವೈಜ್ಞಾನಿಕ ವಿಚಾರಕ್ಕೆ ಪೂರಕವಾಗಿ ಹುಟ್ಟಿರಬಹುದು. ಆದರೆ ಅವು ತಲೆತಲಾಂತರದಿಂದ ಮುಂದುವರಿದುಕೊಂಡು ಬರುವಾಗ ಅದರ ಹಿಂದಿರುವ ಸತ್ಯಾಂಶ ಮರೆಯಾಗಿ ಬರೀ ಆಚರಣೆ ಮಾತ್ರವಾಗಿ ಉಳಿದು ಬರುವುದರಿಂದ ನಂಬಿಕೆಗಳು ಕಾಲಕ್ರಮೇಣ ಮೂಢ ನಂಬಿಕೆಗಳಂತೆಯೇ ಕಂಡು ಬರುವುದು ಹೆಚ್ಚು. ನಂಬಿಕೆ ಹುಟ್ಟುವುದು ವ್ಯಷ್ಟಿ ನೆಲೆಯಲ್ಲಿಯಾದರೂ ಅದು ಸಾಕಾರ ರೂಪ ಪಡೆದುಕೊಳ್ಳುವುದು ಸಮಷ್ಟಿ ನೆಲೆಯಲ್ಲಿ. ಇವು ಪರಿಮಿತವಲಯದಲ್ಲಿ ಸಾರ್ವತ್ರಿಕ ಮನ್ನಣೆಯನ್ನು ಪಡೆದಿದ್ದು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿಯೂ ವಿಶಿಷ್ಟವಾಗಿಯೂ ಬೆಳೆದು ಬಂದಿರುತ್ತದೆ. ಮನುಷ್ಯ ಭಾವನೆ ಒಂದು ವಿಷಯಕ್ಕೆ ಗಟ್ಟಿಯಾಗಿ ಒಪ್ಪಿಕೊಂಡಾಗ ಅದು ನಂಬಿಕೆಯಾಗುತ್ತದೆಯೆಂದು ಬ್ರಿಟಾನಿಕಾ ಎನ್‌ಸೈಕ್ಲೋಪಿಡಿಯಾ ಹೇಳುತ್ತದೆ. ನಂಬಿಕೆಗಳು ಹೆಚ್ಚಾಗಿ ಪರಂಪರೆಯಿಂದ ಬಂದವುಗಳೇ ಆಗಿರುತ್ತವೆ.

ಇಂಥ ನಂಬಿಕೆಯ ಮೂಲವನ್ನು ಶೋಧಿಸುವುದು ಕಷ್ಟದ ಕೆಲಸವಾದರೂ ಅವುಗಳನ್ನು ಅಧ್ಯಯನದ ತೆಕ್ಕೆಗೆ ಒಳಗು ಮಾಡಿಕೊಂಡು ಮುಂದುವರಿದದ್ದೇ ಆದರೆ ಅವಕ್ಕೆ ವೈಜ್ಞಾನಿಕವೂ, ಸಾಂಸ್ಕೃತಿಕವೂ ಆದ ನೆಲೆ ಸಾಧ್ಯವಾಗಬಹುದು.

ಹೀಗೆ ನಮ್ಮ ಸಮಾಜದಲ್ಲಿ ಕಂಬಳಿಯ ಕುರಿತಾಗಿ ಅನೇಕ ಸಂಪ್ರದಾಯ-ಆಚರಣೆಗಳು ಬೆಳೆದು ಬಂದಿರುವಂತೆ ನಂಬಿಕೆಗಳೂ ಉಳಿದು ಬೆಳೆದು ಬಂದಿವೆ. 'ಕುರುಬ ಕಂಬಳಿ ಬೀಸಿದರೆ ಮಳೆ ಬರುತ್ತದೆ' ಎಂಬ ಒಂದು ನಂಬಿಕೆಯಿದೆ. ಇದಕ್ಕೆ ಪೂರಕವಾದ ಕಥೆಯೊಂದನ್ನು ಜನಪದರು ಹೇಳುತ್ತಾರೆ. ಕುರುಬರ ಅಧಿದೈವವಾದ ಬೀರಪ್ಪನ ಶಿಷ್ಯನಾದ ಮಾಳಿಂಗರಾಯನು ಬಿಚಾಳಗುತ್ತಿ ಎಂಬ ಸ್ಥಳದಲ್ಲಿ ಮಳೆ ತರುವೆನೆಂಬ ಶರತ್ತು ಹಾಕಿ ಕಂಬಳಿ ಬೀಸಿ ಮಳೆ ತಂದನೆಂದು ಹೇಳುತ್ತಾರೆ. ಇದರ ವೈಜ್ಞಾನಿಕ ಸತ್ಯಾಸತ್ಯತೆಗಳೇನೇ ಇರಲಿ ಯಾವುದೋ ಕಾಲಕ್ಕೆ ವ್ಯಕ್ತಿಯೊಬ್ಬ ಮಾಡಿದ ಪವಾಡ ಮುಂದೆ ಆ ಕುಲದ ಎಲ್ಲರಿಗೂ ಅನ್ವಯವಾಗಿ 'ಕುರುಬ ಕಂಬಳಿ ಬೀಸಿದರೆ ಮಳೆಯಾಗುತ್ತದೆ' ಎಂಬ ನಂಬಿಕೆ ಸಾರ್ವತ್ರಿಕವಾಯಿತು.

ಕಂಬಳಿಯ ಕುರಿತಾದ ನಂಬಿಕೆಯನ್ನು ಇನ್ನೊಂದು ಸಂದರ್ಭದಲ್ಲಿಯೂ ಕಾಣುತ್ತೇವೆ. ಒಕ್ಕಲಿಗರ ಎಲ್ಲಾ ಬಗೆಯ ಧಾನ್ಯಗಳ ರಾಶಿಗೆ ಆಧಾರವಾದುದು ಮೇಟಿ. ಕಣದಲ್ಲಿ ಮೇಟಿ ಹುಗಿದ ಮೇಲೆ ಮೇಟಿಯ ಮೇಲ್ತುದಿಗೆ ಕಂಬಳಿಯನ್ನು ಹೊಚ್ಚಬೇಕೆನ್ನುವ ನಂಬಿಕೆ ಒಕ್ಕಲಿಗರದು. ಒಕ್ಕಲಿಗರ ಈ ನಂಬಿಕೆಯ ಹಿಂದೆ ಮೇಟಿ ಕಟ್ಟಿಗೆಯ ಮೇಲ್ಭಾಗ ಬಿಸಿಲಿಗೆ ಆನಿಸ(ಬಿರುಕು)ಬಾರದೆಂದು, ಮಳೆಗೆ ಕಟ್ಟಿಗೆಯ ಗುಣಮಟ್ಟ ಕುಸಿಯಬಾರದೆಂಬ ಸತ್ಯಾಂಶವಿದೆ. ಈ ಮೇಟಿ ಕಟ್ಟಿಗೆಯ ಮೇಲೆ ಹಾಕಲು ಜನಪದರು ಹಾಳಾಗುವ ಸ್ಥಿತಿಯಲ್ಲಿರುವ ಕೋರಿ ಕಂಬಳಿಯನ್ನೇ ಬಳಸುತ್ತಾರೆ. ಹೀಗೆ ಕೋರಿ ಕಂಬಳಿಯನ್ನು ಬಳಸುವುದು ಜನಪದರ ಉಳಿತಾಯ ಮನಃಸ್ಥಿತಿಯನ್ನೂ ತಿಳಿಸುತ್ತದೆ. ಹೀಗೆ ಒಕ್ಕಲುತನಕ್ಕೆ ಸಂಬಂಧಿಸಿದಂತೆ ಕಂಬಳಿಯ ಸುತ್ತ ಸಂಪ್ರದಾಯ ಆಚರಣೆಗಳಷ್ಟೇ ಅಲ್ಲದೇ ಅದರ ಬಳಕೆಯ ಕುರಿತಾಗಿಯೂ ಅನೇಕ ನಂಬಿಕೆಗಳನ್ನು ಕಾಣುತ್ತೇವೆ.

ಈ ಮುಂದೆ ಹೇಳುವ ನಂಬಿಕೆ ನೇರವಾಗಿ ಕಂಬಳಿಗೆ ಸಂಬಂಧಿಸಿಲ್ಲವಾದರೂ ಇದು ಕಂಬಳಿ ಮೂಲದ ಉಣ್ಣೆಗೆ ಸಂಬಂಧಿಸಿದ್ದಾದ್ದರಿಂದ ಈ ನಂಬಿಕೆಯನ್ನೂ ಇಲ್ಲಿ ಉಳಿಸಿಕೊಳ್ಳಲಾಗಿದೆ. ಹುಟ್ಟಿದ ಕೂಸಿಗೆ ಉಣ್ಣೆಯ ಕಡೆ ಹಾಕಿದರೆ ಮಗುವಿಗೆ ದೃಷ್ಟಿಯಾಗುವುದಿಲ್ಲವೆಂಬ ನಂಬಿಕೆ ಜನಪದರದ್ದು. ಹಾಗಾಗಿ ಕೂಸಿಗೆ ದೃಷ್ಟಿಯಾಗಬಾರದೆಂದು ಒಂದು ತಿಂಗಳಾಗುವುದರೊಳಗಾಗಿ ಉಣ್ಣೆಕಡೆ ಹಾಕುವರು. ಕುರಿಗಾರರಿಂದ ಉಣ್ಣೆಯನ್ನು ತರಿಸಿಕೊಂಡು ಮನೆಯಲ್ಲಿಯೇ ಅದನ್ನು ಸ್ವಚ್ಛಗೊಳಿಸಿ ನೀರಿನಲ್ಲಿ ನೆನೆಯಿಡುವರು. ನೆನೆಯಿಟ್ಟ ಉಣ್ಣೆಯನ್ನು ಹಿಂಜಿ ನುಣುಪುಮಾಡಿ ಸುಂದರವಾಗಿ ಹೊಸೆದು ಮಗುವಿನ ಕೈಗೆ ಕಡೆಮಾಡಿ ಹಾಕುವರು. ಈ ಉಣ್ಣೆಕಡೆಯನ್ನು ಹೆಣ್ಣು ಮಗುವಿಗೆ ಎರಡೂ ಕೈಗಳಿಗೆ ಮಾತ್ರ ಹಾಕಿದರೆ, ಗಂಡು ಮಗುವಿಗೆ ಎರಡೂ ಕೈಗಳಿಗಷ್ಟೇ ಅಲ್ಲದೆ ಎಡಗಾಲಿಗೂ ಉಣ್ಣೆ ಕಡೆಯನ್ನು ಹಾಕುವರು. ಹೀಗೆ ಉತ್ತರ ಕರ್ನಾಟಕದ ಬಹುಭಾಗದಲ್ಲಿ ಉಣ್ಣೆ ಕಡೆ ಹಾಕುವ ರೂಢಿಯಿದೆ. ಮುಧೋಳ ತಾಲೂಕಿನ ನಾಗರಾಳ ಗ್ರಾಮದಲ್ಲಿ ಹುಟ್ಟಿದ

ಮಗುವಿಗೆ ೫ ತಿಂಗಳಿನೊಳಗಾಗಿ ೩ ಬಾರಿ ಉಣ್ಣೆಯ ಕಡೆ ಹಾಕುವುದು ವಿಶೇಷ. ಮೊದಲನೆಯ ಬಾರಿ ೧ ತಿಂಗಳೊಳಗಾಗಿ, ಎರಡನೆಯ ಬಾರಿ ೩ ತಿಂಗಳೊಳಗಾಗಿ, ೩ನೆಯ ಬಾರಿ ಐದು ತಿಂಗಳೊಳಗಾಗಿ ಹಾಕಿಸುವರು. ಪ್ರತಿಸಾರಿ ಒಡೆಯರೇ ತಂದು ಉಣ್ಣೆ ಕಡೆಯನ್ನು ಹಾಕುವರು. ಹಾಕಿಸಿಕೊಳ್ಳುವ ಮನೆಯವರು ಅವರಿಗೆ ಉಡಿಯಕ್ಕಿಯನ್ನು ಹಾಕುವುದು ರೂಢಿ.[೧೭]

ಹಿಂದೂಗಳು ಹುಟ್ಟಿದ ಕೂಸಿಗೆ ತಿಂಗಳೊಳಗಾಗಿ ಉಣ್ಣೆ ಕಡೆ ಹಾಕಿದರೆ, ಮುಸ್ಲಿಮರು ಹುಟ್ಟಿದ ಮಗುವಿನ ಕೆಳಗೆ ಕಂಬಳಿ ಹಾಸುವ ಅಥವಾ ಕಂಬಳಿ ಇರದಿದ್ದ ಪಕ್ಷದಲ್ಲಿ ಕೂಸಿನ ಹಾಸಿಗೆಗೆ ಉಣ್ಣೆ ಎಳೆಗಳನ್ನಾದರೂ ಕಟ್ಟುವ ರೂಢಿ ಇತ್ತೆಂದು ಹೇಳುವರು.[೧೮]

ಒಟ್ಟಾರೆಯಾಗಿ ಮೇಲಿನ ಎರಡೂ ವಿಭಾಗದಲ್ಲಿ ಕಂಬಳಿಯ ಬಗೆಯನ್ನು ನೋಡಿದಾಗ ಅದಕ್ಕೆ ಯಾವುದೇ ವರ್ಗ, ವರ್ಣಗಳ ಸಂಕುಚಿತತೆ ಇಲ್ಲದೆ ವಿಶಾಲ ವ್ಯಾಪ್ತಿಯಲ್ಲಿ ಅದು ಹರಹಿಕೊಳ್ಳುವುದನ್ನು ಕಾಣುತ್ತೇವೆ.

ಕಂಬಳಿಯ ಸಂಪ್ರದಾಯ ಆಚರಣೆ ನಂಬಿಕೆಗಳ ಕುರಿತಾದ ಇಷ್ಟು ಅಧ್ಯಯನದಲ್ಲಿ ಕಂಬಳಿಯ ಸ್ಥಾನಮಾನವನ್ನು ಮೂರು ಮಟ್ಟಗಳಲ್ಲಿ ಗುರುತಿಸಬಹುದಾಗಿದೆ. ೧. ದೇವರ ಮಟ್ಟ ೨. ಪೂಜಾರಿ, ಗುರುಗಳ ಮಟ್ಟ ೩. ಜನರ ಮಟ್ಟ. ಈ ಮೂರೂ ನೆಲೆಗಳಲ್ಲಿ ಕಂಬಳಿಯ ನೆಲೆ ಪರಂಪರಾಗತವಾಗಿ ತನ್ನ ಗಟ್ಟಿತನವನ್ನು ಉಳಿಸಿಕೊಂಡು ಬಂದಿದೆ. ಪೀಳಿಗೆಯಿಂದ-ಪೀಳಿಗೆಗೆ ಇಂದಿಗೂ ತನ್ನ ಸ್ಥಾನವನ್ನು ಮತ್ತೊಂದು ಅತಿಕ್ರಮಿಸ ದಂತೆ, ಅದನ್ನೇ ಮುಂದುವರೆಸಿಕೊಂಡು ಬರುವಂತೆ ಇರುವ ಕಂಬಳಿ ಎಲ್ಲಾ ಕಾಲ-ಸಂದರ್ಭಗಳಲ್ಲಿ ಸಲ್ಲುವ ವಸ್ತ್ರವೆಂದರೆ ಅತಿಶಯೋಕ್ತಿ ಎನ್ನಿಸದೆನಿಸುತ್ತದೆ.

ಆಚರಣೆ, ಸಂಪ್ರದಾಯಗಳ ಹಿನ್ನೆಲೆಯಲ್ಲಿ ಕಂಬಳಿಯನ್ನು ಪೂಜ್ಯ ಭಾವದಿಂದ ನೋಡುವುದಲ್ಲದೆ, ಅದನ್ನು ದೈವತ್ವದ ಪಟ್ಟಕ್ಕೂ ಏರಿಸುವರು. ಜನಪದರಲ್ಲಿರುವ ಈ ವಸ್ತ್ರ ಕುರಿತಾದ ದೈವಿಕ ಭಾವಕ್ಕೆ ಒಂದಿಷ್ಟು ಮನೋವೈಜ್ಞಾನಿಕ ವಿಶ್ಲೇಷಣೆಯನ್ನು ಕೊಡಬಹುದೆನ್ನಿಸುತ್ತದೆ. ಆ ಕುರಿತಾದ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ನಮ್ಮ ಸಮಾಜದಲ್ಲಿ ಕಪ್ಪು ಆಕಳು ಶ್ರೇಷ್ಠವೆಂಬ ಕಲ್ಪನೆಯ ಜೊತೆ ಅದನ್ನು ಪೂಜಿಸುವುದೂ ಇದೆ. ಅಲ್ಲದೆ ಕಪ್ಪು ಆಕಳಾದ 'ಕವಿಲೆ'ಯ ದಾನವೂ ಪರಮ ಪುಣ್ಯವನ್ನು ದಯಪಾಲಿಸುವುದೆಂಬ ನಂಬಿಕೆಯೂ ಇದೆ. ಜೊತೆಗೆ ಕಪ್ಪು ನಾಯಿಯನ್ನು ಸಾಕ್ಷಾತ್ ಮೈಲಾರಲಿಂಗನ ಅವತಾರವೆಂದು ಭಾವಿಸುವರಲ್ಲದೇ ಅದನ್ನು ಪೂಜಿಸುವರು. ಅಷ್ಟೇ ಅಲ್ಲದೆ ಕಪ್ಪು ಬೆಕ್ಕು ಮನೆಯಲ್ಲಿರಬೇಕು, ಅದಿದ್ದರೆ ಆಗದವರಾರಾದರೂ ಮಾಟ, ಮಂತ್ರ ಮಾಡಿಸಿದರೆ ಅದು ನಾಟುವುದಿಲ್ಲ, ಭೂತ ಪ್ರೇತಗಳ ಕಾಟವೂ ಇರದು ಎಂಬ ನಂಬಿಕೆಯಿಂದಾಗಿ ಕಪ್ಪು ಬೆಕ್ಕನ್ನು ಹುಡುಕಾಡಿ ತಂದು ಮನೆಗಳಲ್ಲಿ ಸಾಕುವುದೂ ಇದೆ. ಇದೇ ದಿಸೆಯಲ್ಲಿ ಧಾರ್ಮಿಕ ಕಾರ್ಯ,

ಶುಭ ಸಂದರ್ಭದಂಥ ಆಚರಣೆಗಳಲ್ಲಿ ಅಪ್ಪಟ ಕರಿಯ ಕಂಬಳಿಯೇ ಆಗಬೇಕು. ಮೇಲಿನ ಇಷ್ಟೂ ಸಂದರ್ಭದಲ್ಲಿನ ಆಕಳು, ನಾಯಿ, ಬೆಕ್ಕು, ಕಂಬಳಿಗಳೆಲ್ಲದರ ಪೂಜ್ಯ ಭಾವದ ಹಿಂದಿನ ಒಂದೇ ಒಂದು ಲಕ್ಷಣವೆಂದರೆ ಅದು ಕಪ್ಪು ಬಣ್ಣ. ಹಾಗಾಗಿ ಈ ಕಪ್ಪು ಬಣ್ಣದ ಕುರಿತಾಗಿಯೇ ಒಂದಿಷ್ಟು ಚರ್ಚೆ ಬೇಕೆನಿಸುತ್ತದೆ.

ಕಪ್ಪು ಬಣ್ಣ ಕತ್ತಲೆಯನ್ನು ಪ್ರತೀಕಿಸುತ್ತದೆ. ಕತ್ತಲೆ ಹುಟ್ಟಿಸುವ ಮೊದಲ ಸಂವೇಗವೇ ಭಯ. ಕತ್ತಲೆಯೊಳಗಿನ ಅಂಧಕಾರವೇ ಭಯಕ್ಕೆ ಮೂಲ ಕಾರಣವಾಗುತ್ತದೆ. ಅಂಧಕಾರದೊಳಗಿನ ನಿಗೂಢತೆ ಭಯದೊಂದಿಗೆ ಅನುಮಾನವನ್ನು ಹುಟ್ಟು ಹಾಕುತ್ತದೆ. ಅದೆಂದರೆ ಕತ್ತಲೆಯ ಈ ನಿಗೂಢತೆಯಲ್ಲಿ ಏನಿದೆಯೋ ಏನೋ ನಿಗೂಢದೊಳಗಿನ ಯಾವುದಾದರೂ ದುಷ್ಟ ಶಕ್ತಿ ತನಗೆಲ್ಲಿ ಅಪಾಯವನ್ನುಂಟು ಮಾಡುವುದೋ ಎಂಬ ತರ್ಕಕ್ಕೆ ಮನಸ್ಸು ಮುಂದಾಗುತ್ತದೆ. ಆ ತರ್ಕದೊಂದಿಗೇ ತನಗೆ ಏನೂ ಆಗದಿರಲಿ ಎಂಬ ಭಾವ ಅಮೂರ್ತವಾದ ಆ ಕತ್ತಲೆಯನ್ನೇ ಅಂಗಲಾಚುವಂತೆ ಮಾಡುತ್ತದೆ. ಈ ಅಂಗಲಾಚುವಿಕೆಯೇ ಭಕ್ತಿಯಾಗಿ, ಕತ್ತಲೆಯೇ ದೈವವಾಗುವುದು ಇದೇ ಹಂತದಲ್ಲಿ. ಅಂತೆಯೇ ನಿಗೂಢತೆಯಿಂದಲೂ ಬೇಕಾದುದನ್ನು ಕೇಳಿ ಪಡೆಯಬಹುದೆಂಬ ತಿಳುವಳಿಕೆ ಜಾಗೃತವಾಗುವುದು. ಕಾರಣ ಮಾನವನಿಗೆ ಹೇಗೇ ಆದರೂ ಬದುಕು ಮುಖ್ಯವಾಗುತ್ತದೆ. ಜೀವದ ಮೇಲಿನ ಈ ಪ್ರೀತಿಯೇ ಎಲ್ಲ ಭಯಕ್ಕೂ ಮೂಲ ಕಾರಣ. ಇದೇ ಕಾರಣದಿಂದಾಗಿಯೇ ಭಯ ಹುಟ್ಟಿಸುವ ಕತ್ತಲೆಯ ನಿಗೂಢದ ಮೂರ್ತ ರೂಪವಾಗಿರುವ ಕಪ್ಪು ಬಣ್ಣವನ್ನೇ ಮನುಷ್ಯ ಆರಾಧಿಸುವಂತೆ ಮಾಡಿತು. ಇದರ ನಂತರದ ಹಂತದಲ್ಲಿ ಚೊಕ್ಕ ಕಪ್ಪಗಿನ ಬಣ್ಣದ ಪ್ರಾಣಿ, ವಸ್ತುವಿನಲ್ಲಿಯೇ ದೇವರನ್ನು ಆಕೃತಿ ರೂಪದಲ್ಲಿ ಕಲ್ಪಿಸಿಕೊಳ್ಳತೊಡಗಿದ. ಈ ಭಾವವೇ ಮೇಲೆ ಹೇಳಿದ ಆಕಳು, ಬೆಕ್ಕು, ನಾಯಿಗಳಂಥ ಪ್ರಾಣಿಗಳನ್ನು ಪೂಜಿಸುವಂತೆ ಮಾಡಿತು. ಅಂತೆಯೇ ಕಪ್ಪು ಬಣ್ಣವನ್ನು ಹೊಂದಿರುವುದರ ಜೊತೆಗೆ ಮನುಷ್ಯ ಬದುಕಿಗೆ ಹಿತವನ್ನುಂಟುಮಾಡಬಲ್ಲ ಅನೇಕ ಗುಣಗಳಿರುವ ಕರಿ ಕಂಬಳಿಯನ್ನೂ ಜನಪದರು ಪೂಜ್ಯನೀಯ ವಸ್ತ್ರವೆಂದು ಪರಿಗಣಿಸುವಂತಾಯಿತಲ್ಲದೇ ಇದೇ ಮನ್ನಣೆ ಬದುಕಿನ ಸಂಪ್ರದಾಯ ಆಚರಣೆಗಳಂಥ ಸಂದರ್ಭಗಳಲ್ಲಿ ಕರಿ ಕಂಬಳಿಗೆ ಪ್ರಾಧಾನ್ಯತೆ ಕೊಡುವಂತೆ ಪ್ರೇರೇಪಿಸಿದೆ.

**ಕಂಬಳಿ ಉಪಯೋಗ**

ಕಂಬಳಿ ಆಚರಣೆ, ಸಂಪ್ರದಾಯಗಳಲ್ಲಿ ಪ್ರಾಮುಖ್ಯತೆ ಪಡೆದಿರುವಂತೆಯೇ ಮನುಷ್ಯನ ನಿತ್ಯಬದುಕಿನ ಅಗತ್ಯವೂ ಆಗಿದೆ. ವರ್ಷದ ಎಲ್ಲಾ ಕಾಲದಲ್ಲಿಯೂ ಕಂಬಳಿ ಮನುಷ್ಯನನ್ನು ಸಂರಕ್ಷಿಸುತ್ತದೆ. ನಾಗರಿಕತೆಯ ಮೊದಲ ಹಂತದಲ್ಲಿ ಮಾನವ ರೂಢಿಸಿಕೊಂಡ ಮಹತ್ವದ ಎರಡು ಕಸುಬುಗಳೆಂದರೆ ಪಶುಸಾಕಾಣಿಕೆ ಮತ್ತು ವ್ಯವಸಾಯ. ಇವೆರಡಕ್ಕೂ ನಿಸರ್ಗವೇ ಮೂಲ. ಪ್ರಕೃತಿಯಲ್ಲಿನ ಹವಾಮಾನದ ಏರುಪೇರುಗಳೆಲ್ಲದರಿಂದ ಕಂಬಳಿ ಮನುಷ್ಯನನ್ನು ರಕ್ಷಿಸುತ್ತದೆ.

ಮಳೆಗಾಲದಲ್ಲಿ ಕಂಬಳಿಯನ್ನು ಕರಿಕೆಳಗೆ ಮಾಡಿ ಎರಡು ಪದರು ಜೋಡಿಸಿ ಮೇಲಿನ ಭಾಗದಲ್ಲಿ ಮೂರು ಮೂಲೆ ಮಡಿಕೆ ಮಾಡಿ ಹೊಲೆದು ತಲೆಗೆ ಹಾಕಿಕೊಂಡರೆ ಅದೇ ಕಂಬಳಿ ಮುಸುಕು, ಕಂಬಳಿ ಕೊಪ್ಪೆ

ಎನ್ನಿಸುತ್ತದೆ. ಕಂಬಳಿಯ ಕೊಪ್ಪೆಯ ಮೇಲ್ಭಾಗ ತಲೆಯನ್ನು ರಕ್ಷಿಸಿದರೆ ಬೆನ್ನ ಮೇಲಿಂದ ಮೊಳಕಾಲವರೆಗೆ ಹರಡಿಕೊಂಡ ಕಂಬಳಿ ಉಳಿದ ದೇಹದ ಭಾಗವನ್ನು ಸಂರಕ್ಷಿಸುತ್ತದೆ. ಹೀಗೆ ಕಂಬಳಿ ನೀರನ್ನು ಹೀರಿಕೊಳ್ಳದೆ Water proof ನಂತೆಯೂ ಕೆಲಸ ಮಾಡುತ್ತದೆ. ಚಳಿಗಾಲದಲ್ಲಿ ಚಳಿಯ ಬಾಧೆಯನ್ನು ದೂರಗೊಳಿಸುವ ಶೀತ ನಿರೋಧಕವಾಗಿ ಬೆಚ್ಚನೆಯ ಅನುಭವವನ್ನು ಕಂಬಳಿ ಕೊಡುತ್ತದೆ.

ಕಂಬಳಿ ರೈತಾಪಿ ಜನ, ಕೂಲಿಕಾರರು, ಕುರುಬರು, ಅಷ್ಟೇ ಅಲ್ಲದೇ ಶ್ರಮಿಕ ವರ್ಗದ ಜನರ ನಿತ್ಯದ ಅವಶ್ಯಕತೆಯಾಗಿದ್ದು, ಮಲಗಲು ಹಾಸಿಗೆಯಾಗಿ, ಭಾರದ ವಸ್ತುವನ್ನು ತಲೆಯ ಮೇಲೆ ಹೊರುವಾಗ ಅದು ತಲೆಗೆ ಚುಚ್ಚಬಾರದೆಂದು ಸಿಂಬಿಯಾಗಿ ಬಳಕೆಗೊಳ್ಳುತ್ತದೆ. ಕಂಬಳಿಯನ್ನು ಕೊರಳಿಗೆ ಕಟ್ಟಿ ಅದನ್ನೇ ಉಡಿಮಾಡಿಕೊಂಡು ಅದರಲ್ಲಿ ಕಾಳುಗಳನ್ನು ಹಾಕಿಕೊಂಡು ಬಿತ್ತನೆಯ ಕಾರ್ಯ ಮಾಡುವರು. ಅಲ್ಲದೇ ಇಂಗು, ಜೀರಿಗೆಯಂಥ ವಸ್ತುಗಳನ್ನು ಮಾರಲು ಒಯ್ಯುವಾಗಲೂ ಕಂಬಳಿಯನ್ನು ಬಳಸುತ್ತಿದ್ದರೆಂಬುದಕ್ಕೆ 'ಇಂಗ ಜೀರಗಿ ಮಾರುಶೆಟ್ಟಿಗೆ ಕೋರಿನಾತ ಕಂಬಳ್ಯೋ' ಎಂಬ ಜನಪದ ಪದ್ಯದ ಸಾಲು ಸಾಕ್ಷಿಯೊದಗಿಸುತ್ತದೆ. ಅಷ್ಟೇ ಅಲ್ಲದೇ ಸ್ಮಶಾನ ಕಾಯುವ ವ್ಯಕ್ತಿ, ಪಶುಪಾಲಕರಿಗೂ ಹೆಗಲಮೇಲೆ ಕಂಬಳಿ ಇರಲೇಬೇಕು. ಜೇನು ಬಿಡಿಸುವವರಿಗೂ ಕಂಬಳಿ ಅವಶ್ಯಕ. ಕಾರಣ ಕಂಬಳಿ ದಪ್ಪಗಿದ್ದು ಜೇನು ಬಿಡಿಸುವಾಗ ಜೇನು ಹುಳಕ್ಕೆ ಅದನ್ನು ದಾಟಿ ಕಚ್ಚಲಾಗುವುದಿಲ್ಲವೆಂಬ ತಿಳುವಳಿಕೆ ಜನಪದರ ಅನುಭವದಿಂದ ಬಂದದ್ದು. ಇಷ್ಟೇ ಅಲ್ಲದೇ ಅಸ್ವಾಭಾವಿಕ ಮರಣ ಸಂದರ್ಭದಲ್ಲಿ ಶವವನ್ನು ಅಂತ್ಯ ಸಂಸ್ಕಾರಕ್ಕೊಯ್ಯುವಾಗಲೂ ಹಲವು ಕಡೆಗೆ ಕಂಬಳಿಯಲ್ಲಿಯೇ ಹಾಕಿಕೊಂಡು ಸ್ಮಶಾನಕ್ಕೊಯ್ಯುವುದಿದೆ. ಕಾರಣ ಅಸ್ವಾಭಾವಿಕ ಸಂದರ್ಭದಿಂದುಂಟಾಗುವ ಸೋಂಕು ನೆರೆದ ಜನಕ್ಕೆ ತಟ್ಟದಿರಲೆಂಬ ಉದ್ದೇಶದಿಂದ ಕಂಬಳಿಯಲ್ಲಿ ಒಯ್ಯುವರೆನ್ನಿಸುತ್ತದೆ.

ಹೀಗೆ ನಿತ್ಯ ಬಳಕೆಯ ಸಂದರ್ಭಗಳಲ್ಲಷ್ಟೇ ಅಲ್ಲದೇ ಅನೇಕ ಸಾಮಾಜಿಕ, ಧಾರ್ಮಿಕ, ಸಂಸ್ಕಾರಯುತ ಸಂದರ್ಭಗಳಲ್ಲಿಯೂ ಕಂಬಳಿ ಬಳಕೆಗೊಳ್ಳುವುದನ್ನುಕಾಣುತ್ತೇವೆ. ಇಷ್ಟೇ ಅಲ್ಲದೇ ಕಂಬಳಿಯಿಂದ ಕೆಲವು ಆರೋಗ್ಯ ಸಂಬಂಧಿ ಉಪಯೋಗಗಳೂ ಇವೆ.

ಆರೋಗ್ಯಕ್ಕೆ ಸಂಬಂಧಪಟ್ಟಂತೆ ಅನೇಕ ರೋಗಗಳ ನಿವಾರಣೆಗಾಗಿ ಜನಪದರು ಕಂಬಳಿಯನ್ನು ಉಪಯೋಗಿಸುತ್ತಾ ಬಂದಿದ್ದಾರೆ. ಅವರ ಈ ಬಳಕೆಯ ಪ್ರಜ್ಞೆಯ ಹಿಂದಿನ ವೈಜ್ಞಾನಿಕ ಸತ್ಯ ಕಾಲದ ತೆಕ್ಕೆಯಲ್ಲಿ ಮರೆಯಾಗಿದ್ದಂತೆ ತೋರುತ್ತದೆ.

**೧. ಕಾಮಾಲೆ ರೋಗ:** ಜನಪದರು ಕಾಮಾಲೆ ರೋಗದ ನಿವಾರಣೆಯಲ್ಲಿ ಕಂಬಳಿಯನ್ನು ಬಳಸಿಕೊಳ್ಳುವುದುಂಟು. ಅವರಿಗೆ ತಮ್ಮದೇ ಆದ ಚಿಕಿತ್ಸಾವಿಧಾನವೊಂದಿದೆ. ಅದೆಂದರೆ ೧೦೧ ಗಿಡದ ತಪ್ಪಲವನ್ನು ತಂದು ನೆರಳಲ್ಲಿ ಒಣಗಿಸುವರು. ತರುವಾಯ ಕಿಚ್ಚು ಹಾಕಿ ಅದರ ಮೇಲೆ ಒಣಗಿದ ಸೊಪ್ಪು ಹಾಕಿದಾಗ ಉಂಟಾಗುವ ಹೊಗೆಯನ್ನು ಕಾಮಾಲೆಯಾದ ವ್ಯಕ್ತಿಗೆ ಕಂಬಳಿ ಮುಸುಕು ಹಾಕಿ ತೆಗೆದುಕೊಳ್ಳಲು

ಕೊಡಲಾಗುತ್ತದೆ.[೯] ಈ ಚಿಕಿತ್ಸೆಯಲ್ಲಿ ಸತ್ಯಾಸತ್ಯತೆಗಳೇನೇಯಿದ್ದರೂ ಇಷ್ಟೊಂದು ವೈದ್ಯಕೀಯ ಸೌಲಭ್ಯದ ಮಧ್ಯದಲ್ಲಿಯೂ ಜನಪದರು ಈ ಚಿಕಿತ್ಸೆಯನ್ನು ಮುಂದುವರಿಸಿಕೊಂಡು ಬರುತ್ತಿರುವರೆಂದರೆ ಅದರಲ್ಲಿ ಸ್ವಲ್ಪ ಮಟ್ಟಿನ ಸತ್ಯಾಂಶವಾದರೂ ಇದ್ದಿರಬೇಕೆನ್ನಿಸುತ್ತದೆ.

**೨. ಹೈತಗಿ:** ಇದು ಚರ್ಮರೋಗಕ್ಕೆ ಸಂಬಂಧಿಸಿದ ರೋಗ. ಈ ರೋಗದ ಲಕ್ಷಣವೆಂದರೆ ಮೈತುಂಬ ದೊಡ್ಡ ದೊಡ್ಡ ಗುಳ್ಳೆಗಳಾಗುತ್ತವೆ. ಸ್ವಲ್ಪ ಸ್ವಲ್ಪವೇ ಈ ಗುಳ್ಳೆಗಳಾಗುತ್ತಿರುವಂತೆಯೇ ಜನಪದರು ಅಗ್ಗಿಷ್ಟಿಕೆ ಹಾಕಿ ಬರಿಮೈ ಮೇಲೆ ಕಂಬಳಿ ಮುಸುಕು ಹಾಕಿ ದೇಹಕ್ಕೆ ಶಾಖ ಕೊಡುವರು. ಆ ಶಾಖಕ್ಕೆ ಗುಳ್ಳೆಗಳು ಮತ್ತಷ್ಟು ಹೆಚ್ಚಾಗುತ್ತವೆ. ಅವು ಹಾಗೆ ಹೆಚ್ಚಾಗಿ ಮೈಯಿಂದ ಸಂಪೂರ್ಣ ಹೊರಬೀಳಬೇಕೆನ್ನುವುದು ಜನಪದರ ನಂಬಿಕೆ. ಕಂಬಳಿಯಲ್ಲಿ ಚರ್ಮರೋಗ ನಿವಾರಣೆಯ ಸಾಮರ್ಥ್ಯವಿದೆಯೆಂಬ ಕೆಲವರ ಅಭಿಪ್ರಾಯಕ್ಕೆ ಜನಪದರ ಈ ಚಿಕಿತ್ಸೆ ಮತ್ತಷ್ಟು ಪುಷ್ಟಿ ನೀಡುತ್ತದೆ.

**೩. ಅಗ್ನಿಶಾಮಕವಾಗಿ:** ಬೆಂಕಿ ಹತ್ತಿದ ವ್ಯಕ್ತಿಗೆ ಬೆಂಕಿಯನ್ನು ನಂದಿಸುವಾಗ ಕಂಬಳಿಗೇ ಆದ್ಯತೆ ಕೊಡುವರು. ಬೆಂಕಿಯು ಗಾಳಿ ಮತ್ತು ಇಂಧನದ ಸಮ್ಮಿಶ್ರಣ. ಬೆಂಕಿ ಹತ್ತಿದ ವ್ಯಕ್ತಿಗೆ ಕಂಬಳಿ ಹೊಚ್ಚಿದಾಗ ಆ ಕಂಬಳಿ ಗಾಳಿ ಒಳಬರದಂತೆ ತಡೆಯುತ್ತದೆ. ಯಾವಾಗ ಗಾಳಿಯ ಪೂರೈಕೆ ಸ್ಥಗಿತವಾಗುತ್ತದೋ ಆಗ ಬೆಂಕಿ ತನ್ನಿಂತಾನೇ ಆರುವುದು. ಅಲ್ಲದೇ ಕಂಬಳಿ ಬೆಂಕಿಗೆ ಒಮ್ಮಿಂದೊಮ್ಮೆಲೇ ಸುಡುವುದಿಲ್ಲ. ಈ ಎಲ್ಲ ಕಾರಣಗಳೂ ಬೆಂಕಿ ಆರಿಸಲು ಕಂಬಳಿಯನ್ನೇ ಬಳಸುವಂತೆ ಪ್ರೇರೇಪಿಸುತ್ತದೆ.

**೪. ಹೆರಿಗೆ ಸಮಯದಲ್ಲಿ:** ಹೆರಿಗೆಯಾದ ನಂತರದ ಒಂದು ತಿಂಗಳವರೆಗೆ ಬಾಣಂತಿ ಮನೆಯಿಂದ ಹೊರ ಹೋಗುವಾಗ ಕಂಬಳಿ ಹೊದ್ದು, ಕೈಯಲ್ಲಿ ಬೇವಿನ ತೊಪ್ಪಲ ಹಿಡಿದೇ ಹೋಗಬೇಕು ಎನ್ನುವ ರೂಢಿ ಜನಪದರಲ್ಲಿದೆ. ಹೆರಿಗೆ ಸಮಯದಲ್ಲಿ ಬಾಣಂತಿಯಲ್ಲಿನ ರೋಗ ನಿರೋಧಕ ಶಕ್ತಿ ಕುಂಠಿತವಾಗಿ ದೇಹ ಎಲ್ಲ ತೆರನಾದ ಸೋಂಕುಗಳಿಗೆ ಬಹುಬೇಗನೇ ಸ್ಪಂದಿಸುವಂತಾಗಿರುತ್ತದೆ. ಕಂಬಳಿ ಬಾಣಂತಿಗೆ ಶೀತ, ಗಾಳಿಗಳಿಂದ ರಕ್ಷಣೆಯನ್ನೊದಗಿಸುವುದರ ಜೊತೆಗೆ ಬೇವು ಮತ್ತು ಕಂಬಳಿಗಳು ಸ್ವಲ್ಪ ಮಟ್ಟಿನ ಸೋಂಕನ್ನು ತಡೆಗಟ್ಟಬಲ್ಲವೆಂಬ ಕಾರಣ ಈ ಉಪಯೋಗದ ಹಿಂದೆ ಇದ್ದಿರಬಹುದಾಗಿದೆ.

ಹೀಗೆ ಕಂಬಳಿ ಆರೋಗ್ಯ ಸಂಬಂಧಿಯಾಗಿ ಬಳಕೆಗೊಳ್ಳುವುದರ ಅಧ್ಯಯನ ಕಂಬಳಿಯ ವಿಶಿಷ್ಟ ವೈಜ್ಞಾನಿಕ ಲಕ್ಷಣಗಳನ್ನು ಗುರುತಿಸುವಲ್ಲಿ ಸಹಕಾರಿಯಾಗಬಲ್ಲದು. ಈ ತೆರನಾಗಿ ಸಾಮಾನ್ಯ ಹೊದೆಯುವ ವಸ್ತುವಾಗುವುದರಿಂದ ಹಿಡಿದು ಅನೇಕ ರೋಗಗಳ ನಿವಾರಣೆಯಲ್ಲಿ ಭಾಗಿಯಾಗುವವರೆಗಿನ ವಿವಿಧ ಹಂತಗಳಲ್ಲಿ ಕಂಬಳಿ ಮನುಷ್ಯನ ಬದುಕಿಗೆ ಉಪಯುಕ್ತವಾಗಿದೆ.

**ಕೊನೆ ಟಿಪ್ಪಣಿಗಳು**

೧. ಉಲ್ಲೇಖ : ಉತ್ತರ ಕರ್ನಾಟಕದ ಮದುವೆ ಸಂಪ್ರದಾಯಗಳು, ಡಾ.ಎ.ಎಂ.ಸತ್ಯನಾಯಕ, ಪುಟ ೨೯

೨. ಕರ್ನಾಟಕ ಜಾನಪದ ಪ್ರಧಾನ ಸಂಪಾದನೆ : ಡಾ.ಎಸ್.ಕೆ.ಕರೀಂಖಾನ್, ಪುಟ ೩೨೫

೩. ಉತ್ತರ ಕರ್ನಾಟಕದ ಮದುವೆ ಸಂಪ್ರದಾಯಗಳು : ಡಾ.ಎ.ಎಂ.ಸತ್ಯನಾಯಕ, ಪುಟ ೬೮

೪. ಉತ್ತರ ಕರ್ನಾಟಕದ ಮದುವೆ ಸಂಪ್ರದಾಯಗಳು : ಡಾ.ಎ.ಎಂ.ಸತ್ಯನಾಯಕ, ಪುಟ ೭೯

೫. ಹೇಳಿದವರು : ಪಾರ್ವತೆವ್ವ ಕುಂಬಾರ ಸಾ. ಬಾಡಗಿ.

೬. ಉತ್ತರ ಕರ್ನಾಟಕದ ಮದುವೆ ಸಂಪ್ರದಾಯಗಳು : ಡಾ.ಎ.ಎಂ.ಸತ್ಯನಾಯಕ, ಪುಟ ೧೨೫

೭. ಉತ್ತರ ಕರ್ನಾಟಕದ ಮದುವೆ ಸಂಪ್ರದಾಯಗಳು : ಪುಟ ೧೭೩

೮. ಹೇಳಿದವರು : ಪದ್ಮಾವತಿ ಇಟ್ಟಣ್ಣವರ. ಸಾ. ಮುಧೋಳ

೯. ಜಾನಪದ ಕೈಪಿಡಿ : ಪ್ರ.ಸಂ. ಡಾ.ಎಚ್.ಜೆ.ಲಕ್ಕಪ್ಪಗೌಡ, ಪುಟ ೩೭೯

೧೦. ಹೇಳಿದವರು : ಬಸವ್ವ ಮೋದಿ, ಸಾ. ಬಸವಹಂಚಿನಾಳ

೧೧. ಹೇಳಿದವರು : ಮೀನಾಕ್ಷಿ ಕೊತ್ತಲಮಠ, ಸಾ. ಬೀಳಗಿ

೧೨. ಹೇಳಿದವರು : ಕರಿಯಪ್ಪ ಮುಪ್ಪಯ್ಯ ಪೂಜಾರಿ, ಸಾ. ಬೀಳಗಿ

೧೩. ಹೇಳಿದವರು : ಬಸಪ್ಪ ಇಟ್ಟಣ್ಣವರ, ಸಾ. ಯಾದವಾಡ

* ಕಂಬಳಿಯ ಎರಡೂ ಬದಿಗಳಲ್ಲಿ ನೇಯ್ಗೆ ಮಾಡದೇ ಉಳಿದ ಉಣ್ಣೆಯ ಎಳೆಗಳು

** ಹೆಚ್ಚಿನ ಮಾಹಿತಿಗಾಗಿ ಡಾ.ಬಿ.ಜಿ.ಬಿರಾದಾರ ಅವರ ಕುರುಬರ ಗುರು ಒಡೆಯರು : ಸಾಂಸ್ಕೃತಿಕ ಅಧ್ಯಯನ, ಮಹಾ ಪ್ರಬಂಧ ನೋಡಿ ಪುಟ ೧೫೫

130110

೧೪. ಹೇಳಿದವರು : ಪಾರ್ವತೆವ್ವ ಕುಂಬಾರ ಸಾ. ಬಾಡಗಿ

೧೫. ಹೇಳಿದವರು : ಸವಿತಾ ಅಡಕೆ, ಸಾ. ನಾಗರಾಳ

೧೬. ಶ್ರೀಮತಿ ಕೆ. ಶರೀಫಾ, ಸಾ. ಹರಿಹರ

ಕನ್ನಡ ಗ್ರಂಥಾಲಯ

೧೭. ಕರೆವ್ವ ಕೆರಕಲಕಟ್ಟಿ, ಸಾ. ಬೋಳಣಕಿ, ಯಾವಗಲ್

೧೮. ಗೌರವ್ವ ವಿಠ್ಠಲ ಹಲಗಲಿ, ಸಾ. ಬಸವ ಹಂಚನಾಳ

೧೯. ಸಿದ್ದಪ್ಪ ಸಾಬಣ್ಣ ಬಿದರಿ, ಸಾ. ಬೀಳಗಿ

ಅಧ್ಯಾಯ ೪

# ಕಂಬಳಿ ಉದ್ಯಮ

ಆದಿಮಾನವನ ಮತ್ತು ನಾಗರಿಕತೆಯ ಮೊದಲ ಹಂತದಿಂದಲೂ ಕುರಿ ಸಾಕಾಣಿಕೆ, ಕಂಬಳಿ ಉತ್ಪಾದನೆ ಮಾರಾಟದಂತಹ ಕ್ರಿಯೆಗಳು ನಡೆದುಕೊಂಡೇ ಬಂದಿವೆ. ಮೊದಲು ವಸ್ತುವಿನಿಮಯದ ರೂಪದಲ್ಲಿ ಕೊಡುಕೊಳ್ಳುವಿಕೆ ನಡೆಯುತ್ತಿದ್ದು ಇಲ್ಲಿ ಲಾಭಗಳಿಕೆ ಮುಖ್ಯವಾಗಿರದೇ ಮೂಲ ಅವಶ್ಯಕತೆಗಳ ಪೂರೈಕೆಯೇ ಪ್ರಧಾನವಾಗಿತ್ತು. ಆದರೆ ನಂತರದ ದಿನಗಳಲ್ಲಿ ಮನುಷ್ಯ ಬದುಕಿನ ಮೇಲೆ ಯಾವಾಗ ಹತೋಟಿ ಆರಂಭವಾಯಿತೋ -ಅದು ರಾಜಪ್ರಭುತ್ವದ ರೂಪದಲ್ಲಾಗಿರಬಹುದು, ಪ್ರಜಾಪ್ರಭುತ್ವದ ರೂಪದಲ್ಲಾಗಿರ ಬಹುದು- ಹತೋಟಿ ಆರಂಭವಾದಾಗಲೇ ಮನುಷ್ಯ ಸ್ವಾರ್ಥಿಯಾಗತೊಡಗಿದ. ಕಾರಣ ಯಾವುದೇ ವ್ಯಕ್ತಿಗೆ ತನ್ನ ಬದುಕಿನ ಮೇಲೆ ಮತ್ತೊಬ್ಬರು ಹಿಡಿತ ಸಾಧಿಸುವರೆಂಬುದು ಒಪ್ಪಿತವಾಗದು. ಆದರೆ ಅದು ವ್ಯವಸ್ಥೆಯ ಭಾಗವಾದಾಗ ಒಪ್ಪಿಗೆ ಅನಿವಾರ್ಯವಾಗುತ್ತದೆ. ಆ ಹಂತದಲ್ಲಿಯೇ ನಾನು, ನನ್ನದು ಎಂಬ ಭಾವ ಜಾಗೃತ ಗೊಂಡು ಅದೇ ಮುಖ್ಯವಾಗಿ ತನ್ನ ಬದುಕನ್ನು ಕೈಲಾದಷ್ಟು ಸುರಕ್ಷಿತಗೊಳಿಸಿಕೊಳ್ಳಬೇಕೆನ್ನುವ ಮನಃಸ್ಥಿತಿ ಹುಟ್ಟಿಕೊಳ್ಳುವುದು ಮನುಷ್ಯ ಸಹಜ ಗುಣ. ಹೀಗೆ ಬದುಕಿನ ಸುರಕ್ಷತತೆಗೆ ಆರ್ಥಿಕತೆ ಪ್ರಮುಖವಾಗ ತೊಡಗಿದಾಗ ವ್ಯವಹಾರ ಗುಣವೇ ಮುಖ್ಯವಾಗಿ ಲಾಭ ಗಳಿಕೆಯೇ ಪ್ರಧಾನವಾಗುತ್ತದೆ.

ಯಾವುದೇ ಒಂದು ವಸ್ತುವು ಸಮಾಜದ ಎಲ್ಲರ ಅವಶ್ಯಕತೆಯಾಗಿದ್ದು ಒಂದು ನಿರ್ದಿಷ್ಟ ಜನಸಮುದಾಯದಿಂದ ಮಾತ್ರ ದೊರಕುತ್ತಿದ್ದರೆ ಉಳಿದೆಲ್ಲರಿಗೂ ಆ ಜನಸಮುದಾಯದಿಂದ ಅಂಥ ವಸ್ತುವಿನ ಪಡೆಯುವಿಕೆ ಅಗತ್ಯವಾಗುತ್ತದೆ. ಮೊದಮೊದಲು ಈ ಪಡೆಯುವಿಕೆ ಯಾವುದಾದರೂ ವಸ್ತುವಿನ ರೂಪದಲ್ಲಿ ವಿನಿಮಯವಾಗುತ್ತಿದ್ದು ಬರಬರುತ್ತ ವ್ಯವಹಾರ ರೂಪ ಪಡೆದುಕೊಂಡು ಕುಲಕಸಬು ಉದ್ಯಮದ ಸ್ವರೂಪ ಪಡೆದುಕೊಳ್ಳುತ್ತದೆ. ಕುರುಬರ ಕುಲಕಸುಬಾದ ಕಂಬಳಿ ನೇಯ್ಗೆಯು ವ್ಯವಹಾರದ ರೂಪ ಪಡೆದು ಉದ್ಯಮವಾಗಿ ಬೆಳೆದದ್ದು ಇದೇ ತೆರನಾಗಿ.

ಕಂಬಳಿಯನ್ನು ನೇಯುವವರು ಕುರುಬರೇ ಆದರೂ ಅವರಲ್ಲಿಯೂ ಮತ್ತೆ ಉಣ್ಣೆ ಕಂಕಣದ ಕುರುಬರಿಗೇ ಇದು ಪ್ರಧಾನ ಉದ್ಯೋಗ. ಎಲ್ಲೋ ಅಪರೂಪಕ್ಕೆಂಬಂತೆ ಬೇರೆ ಜಾತಿಯ ಕಂಬಳಿ ನೇಕಾರರು

ಇರುವುದಾಗಿ ತಿಳಿದು ಬರುತ್ತದೆ. ಪ್ರಸ್ತುತ ಈ ಕ್ಷೇತ್ರದಲ್ಲಿ ಯಾಂತ್ರಿಕತೆಯ ಪ್ರವೇಶದಿಂದಾಗಿ ಕಂಬಳಿ ನೇಕಾರಿಕೆಯು ಗೃಹ ಕೈಗಾರಿಕೆಯನ್ನು ದಾಟಿ ಸಾಂಘಿಕ ಉದ್ದಿಮೆಯ ರೂಪ ಪಡೆದುಕೊಂಡಿದೆ. ಉದ್ದಿಮೆಯಾಗಿ ಪರಿವರ್ತನೆಯಾದ ಫಲವಾಗಿ ಕಂಬಳಿ ನೇಕಾರಿಕೆ ಜಾತಿ ಸೀಮಿತತೆಯಿಂದ ಪಾರಾಗಿ ಮುಕ್ತವಾಗಿ ತೆರೆದು ಕೊಳ್ಳುತ್ತಲಿರುವುದು ಆಶಾದಾಯಕ ಬೆಳವಣಿಗೆಯೆನ್ನಿಸುತ್ತದೆ.[೧]

ಅಧ್ಯಯನದ ಅನುಕೂಲಕ್ಕಾಗಿ ಈ ಅಧ್ಯಾಯವನ್ನು ಪ್ರಮುಖವಾಗಿ ಎರಡು ಘಟ್ಟಗಳಲ್ಲಿ ನೋಡಲಾಗಿದೆ. ೧. ಕಂಬಳಿಯ ಉತ್ಪಾದನೆ ೨. ಮಾರಾಟ ವ್ಯವಸ್ಥೆ. ಈ ಎರಡೂ ಭಾಗಗಳಲ್ಲಿ ಸಾಂದರ್ಭಿಕ ವಾಗಿ ಮತ್ತೆ ಅನೇಕ ಉಪವಿಭಾಗಗಳನ್ನಾಗಿ ಮಾಡಿಕೊಂಡು ಪ್ರಸ್ತುತ ವಿಷಯವನ್ನು ಚರ್ಚಿಸಲಾಗಿದೆ.

**ಕಂಬಳಿ ಉತ್ಪಾದನೆ**

ಈ ಭಾಗದಲ್ಲಿ ಕಂಬಳಿ ತಯಾರಿಕೆಗೆ ಬೇಕಾದ ಕಚ್ಚಾವಸ್ತುವಾದ ಉಣ್ಣೆ ಸಂಗ್ರಹಣೆಯಿಂದ ಹಿಡಿದು ಕಂಬಳಿ ಸಿದ್ಧಗೊಳ್ಳುವವರೆಗಿನ ಅನೇಕ ಹಂತಗಳನ್ನು ಈ ಮುಂದಿನಂತೆ ನೋಡಬಹುದಾಗಿದೆ.

೧. ಉಣ್ಣೆ ಸಂಗ್ರಹಣೆ

೨. ನೂಲುವಿಕೆ

೩. ಉಂಕೆ ಮಾಡುವುದು

೪. ನೇಯ್ಗೆ

೫. ವ್ಯವಸ್ಥಿತ ಆಕಾರ ಕೊಡುವುದು

ಹೀಗೆ ಐದು ಪ್ರಮುಖ ಹಂತಗಳನ್ನು ಗುರುತಿಸಿಕೊಂಡರೂ ಇವುಗಳೊಳಗೇ ಅನೇಕ ಉಪಹಂತಗಳನ್ನು ಗುರುತಿಸಬಹುದಾಗಿದೆ.

**೧. ಉಣ್ಣೆಸಂಗ್ರಹಣೆ**

ಕಂಬಳಿಗೆ ಬೇಕಾದ ಉಣ್ಣೆಯನ್ನು ಕುರಿಯ ಕೂದಲಿನಿಂದ ಪಡೆಯಲಾಗುತ್ತದೆ. ಕಂಬಳಿಗಾಗಿ 'ಆರು ತಿಂಗಳು ಬೆಳೆದ ಆಡು, ಕುರಿಗಳ ಉಣ್ಣೆಯನ್ನು ತೆಗೆಯಬೇಕು.[೧] ಇಷ್ಟು ಕಾಲ ಸೊಂಪಾಗಿ ತುಪ್ಪಳ ಬೆಳೆದ ನಂತರ ಅನುಕೂಲವಾದಾಗ ವರ್ಷದಲ್ಲಿ ಎರಡು ಬಾರಿ ಉಣ್ಣೆ ಕೊಯ್ಲನ್ನು ಮಾಡುವರು. ಒಮ್ಮೆ ಕಾರಹುಣ್ಣಿಮೆ ಮತ್ತೊಮ್ಮೆ ದೀಪಾವಳಿ ಸುತ್ತ ಈ ಉಣ್ಣೆ ಸಂಗ್ರಹಣೆಯ ಕಾರ್ಯ ನಡೆಯುತ್ತದೆ. ಕುರಿಸಾಕಾಣಿಕೆ ಮಾಡುವ ಎಲ್ಲರೂ ಉಣ್ಣೆ ಸಂಗ್ರಹಿಸುವರು. ಆದರೆ ಹೀಗೆ ಸಂಗ್ರಹಿಸಿದವರೆಲ್ಲರೂ ಕಂಬಳಿ ನೇಯುವುದಿಲ್ಲ. ತುಪ್ಪಳ ಕತ್ತರಿಸುವುದೂ ಒಂದು ಕಲೆ. ಅದು ಎಲ್ಲರಿಗೂ ಬರುವಂಥದ್ದಲ್ಲ. ತುಪ್ಪಳವನ್ನು ಕತ್ತರಿಸಲು ಬಾರದ ಕುರಿಸಾಕಾಣಿಕೆದಾರರು ಕೂಲಿಕೊಟ್ಟು ಪರಿಣಿತನಿಂದ ತುಪ್ಪಳವನ್ನು ಕತ್ತರಿಸುವರು. ಹೀಗೆ ತುಪ್ಪಳವನ್ನು ತೆಗೆಯುವಾಗ ಕುರಿಯ ಅಂದಗೆಡದಂತೆ 'ಪಶುಗಳ ತುಪ್ಪಟ ಅಂದಗೆಡದೆ ತೆಗೆದ ನೂವ' ತೆಗೆಯಬೇಕೆಂದು ಹೇಳುವರು.[೨]

ಉಣ್ಣೆ ಸಂಗ್ರಹಿಸುವ ದಿನ ಎಲ್ಲ ಕುರಿಗಳನ್ನು ದಡ್ಡಿಯಲ್ಲಿಯೋ, ಇಲ್ಲವೇ ಹತ್ತಿರದ ನದಿ-ಹಳ್ಳಗಳಲ್ಲಿ ಒಂದೆಡೆ ಕೂಡಿ ಹಾಕಿ ಅವುಗಳನ್ನು ಚೆನ್ನಾಗಿ ತೊಳೆಯುವರು. ತೊಳೆದ ನಂತರ ಅಲ್ಲಿಯೇ ಅಥವಾ ಕುರಿದೊಡ್ಡಿಗಳಲ್ಲಿ ತುಪ್ಪಳ ಕತ್ತರಿಸುವರು. ಹೀಗೆ ಉಣ್ಣೆ ಸಂಗ್ರಹಿಸುವವರನ್ನು ಈ ತೆರನಾಗಿ ಕಾಣುತ್ತೇವೆ. ಕಂಬಳಿ ನೇಕಾರರು ತಾವು ಸಾಕಿದ ಕುರಿಗಳಿಂದಲೇ ಉಣ್ಣೆಯನ್ನು ಸಂಗ್ರಹಿಸಿ ಕಂಬಳಿ ನೇಯುವದು ಹೆಚ್ಚು. ಕಂಬಳಿ ನೇಕಾರಿಕೆಯನ್ನು ಮಾಡದ ಆದರೆ ಕುರಿಸಾಕಾಣಿಕೆ ಮಾಡುವ ಕುರುಬರೂ ಸೇರಿದಂತೆ ಗೊಲ್ಲರು, ಒಕ್ಕಲಿಗರು, ಲಿಂಗಾಯತರೂ ಕೂಡ ಉಣ್ಣೆ ಸಂಗ್ರಹಣೆ ಮಾಡುವರು. ಇಷ್ಟೇ ಅಲ್ಲದೇ ಉಣ್ಣೆ ತುಂಬುವ ವ್ಯವಹಾರವನ್ನೇ ಪ್ರಧಾನವಾಗಿ ಮಾಡುವ ವ್ಯಾಪಾರಸ್ಥರು ನಮ್ಮಲ್ಲಿ ಕಾಣಸಿಗುತ್ತಾರೆ. ಅವರು ಊರೂರು ತಿರುಗಾಡಿ ತುಪ್ಪಳವನ್ನು ಸಂಗ್ರಹಿಸುವರು. ಹೀಗೆ ಕುರುಬರು ಕುರುಬರಲ್ಲದವರಿಂದಲೂ ಉಣ್ಣೆ ಸಂಗ್ರಹಣೆ ಕಾರ್ಯ ನಡೆಯುತ್ತದೆ. ಉಣ್ಣೆ ಕತ್ತರಿಸುವಲ್ಲಿ ಪರಿಣತಿಯನ್ನು ಪಡೆದ ವ್ಯಕ್ತಿ ದಿನವಿಡೀ ತುಪ್ಪಳವನ್ನು ಕತ್ತರಿಸಿದರೆ ಸರಾಸರಿ ಸುಮಾರು ೨೦ ಕುರಿಯ ತುಪ್ಪಳವನ್ನು ತೆಗೆಯಬಲ್ಲ. ಕಂಬಳಿ ನೇಯ್ಗೆಗೆ ಬೇಕಾದ ಉಣ್ಣೆಯನ್ನು ಎರಡು ಬಗೆಯಲ್ಲಿ ಕತ್ತರಿಸುವರು.

೧. ತುಪ್ಪಳವನ್ನು ಕತ್ತರಿಸುವ ಮೊದಲೇ ಕುರಿಗಳನ್ನು ಚೆನ್ನಾಗಿ ತೊಳೆದು ಕತ್ತರಿಸುವುದು. ಇದು ಉತ್ತಮ ಮಟ್ಟದ ತುಪ್ಪಳವಾಗಿರುತ್ತದೆ. ಕಾರಣ ಹೀಗೆ ಕುರಿಗಳನ್ನು ತೊಳೆಯುವುದರಿಂದ ಮೈಗಂಟಿದ ಕೊಳೆಯೆಲ್ಲ ಹೋಗಿ ತುಪ್ಪಳ ಸ್ವಚ್ಛಗೊಳ್ಳುವುದು.

೨. ಕುರಿಗಳನ್ನು ತೊಳೆಯದೇ ತುಪ್ಪಳ ಕತ್ತರಿಸುವುದು. ಇದನ್ನು ಬೆವರು ತುಪ್ಪಟವೆಂದು ಕರೆಯುವರು. ಹೀಗೆ ತುಪ್ಪಳ ಕತ್ತರಿಸಿದ ನಂತರ ಅದನ್ನು ಗೆರೆಸೆಗಳಲ್ಲಿ ಹಾಕಿ ಹೊಳೆ ಅಥವಾ ಕೆರೆಗಳಲ್ಲಿ ಜಾಲಾಡಿಸಿ ತೊಳೆದು ಒಣಗಿಸುವರು. ಹೀಗೆ ಎರಡು ವಿಧದಲ್ಲಿ ಉಣ್ಣೆಯ ಗುಣಮಟ್ಟದ ವ್ಯತ್ಯಾಸವನ್ನು ಕಾಣುತ್ತೇವೆ.

ಸಂಗ್ರಹಿಸಿದ ಉಣ್ಣೆಯನ್ನು ಜನಪದರು 'ಬಂಡ' ಎಂತಲೂ ಕರೆಯುವರು. ಈ ಹಿಂದೆ ನೋಡಿದಂತೆ ಬೇರೆ ಬೇರೆ ತೆರನಾಗಿ ಬಂಡ ಸಂಗ್ರಹಿಸಿದವರೆಲ್ಲರೂ ತಾವು ಸಂಗ್ರಹಿಸಿದ ತುಪ್ಪಳವನ್ನು ಕಂಬಳಿಗಾಗಿಯೇ ವಿನಿಯೋಗಿಸುತ್ತಾರೆ. ಕಂಬಳಿ ನೇಕಾರರೇ ಆಗಿದ್ದವರು ತಾವು ಸಂಗ್ರಹಿಸಿದ ಉಣ್ಣೆಯಿಂದಲೇ ಕಂಬಳಿ ನೇಯುವರು. ಅದನ್ನೇ ಪ್ರಧಾನ ಉದ್ಯೋಗವನ್ನಾಗಿ ಮಾಡುವವರಿಗೆ ತಾವು ಸಂಗ್ರಹಿಸಿದ ಬಂಡವಷ್ಟೇ ಸಾಲದು. ಆಗ ಅವರು ಉಣ್ಣೆ ವ್ಯಾಪಾರಿಗಳಿಂದಲೋ ಅಥವಾ ಕಂಬಳಿ ನೇಕಾರರಲ್ಲದ ಉಣ್ಣೆ ಸಂಗ್ರಹಣೆಕಾರ ರಿಂದಲೋ ತುಪ್ಪಳವನ್ನು ಖರೀದಿಸುವರು. ನೇಕಾರರಲ್ಲದವರು ತಾವು ಸಂಗ್ರಹಿಸಿದ ಉಣ್ಣೆಗೆ ಇಂತಿಷ್ಟು ಕಂಬಳಿ ನೇಯ್ದು ಕೊಡಬೇಕೆಂಬ ಕರಾರಿನೊಂದಿಗೆ ನೇಕಾರರಿಗೆ ತುಪ್ಪಳವನ್ನು ಕೊಡುವರು. ಉಣ್ಣೆ ತುಂಬುವವರೂ ಕೂಡ ಕಾಲಕ್ಕನುಗುಣವಾಗಿ ಉಣ್ಣೆಯ ಬೆಲೆಯನ್ನು ಅಥವಾ ಕಂಬಳಿಯನ್ನು ಮೊದಲೇ ನಿರ್ಧರಿಸಿದಂತೆ ಪಡೆಯುವರು. ಈ ತೆರನಾಗಿ ಸ್ಥಳೀಯವಾಗಿ ಸಿಕ್ಕುವ ಉಣ್ಣೆಯನ್ನು ಖರೀದಿಸುವುದಲ್ಲದೇ ಉನ್ನತ ಮಟ್ಟದ ಬ್ರೌನ್ ವೂಲ್ ಟಾಪ್, ಮೆರಿನೋ, ಆಸ್ಟ್ರೇಲಿಯಾ ಉಣ್ಣೆಯಂಥ ಸಂಸ್ಕರಿಸಿದ ಉಣ್ಣೆಯನ್ನು

ಲುಧಿಯಾನಾ, ಚಂಡೀಗಢ ಮುಂತಾದ ಉಣ್ಣೆ ಕಾರ್ಖಾನೆಗಳಿಂದಲೂ ತುಪ್ಪಳವನ್ನು ಖರೀದಿಸುತ್ತಾರೆ. ಈ ತುಪ್ಪಳ ಸಂಗ್ರಹಣೆ ವೈಯಕ್ತಿಕ ಮತ್ತು ಸಾಂಘಿಕ ಎರಡೂ ಮಟ್ಟದಲ್ಲಿ ನಡೆಯುತ್ತದೆ. ಹೀಗೆ ಸಂಗ್ರಹಿಸಿದ ತುಪ್ಪಳವನ್ನು ಸುಮಾರು ಆರು ತಿಂಗಳ ಒಳಗಾಗಿ ವಿನಿಯೋಗಿಸಬೇಕು. ಇರದಿದ್ದರೆ ಹುಳು ಹತ್ತಿ ಉಣ್ಣೆ ಹಾಳಾಗುತ್ತದೆ. ಈ ಆರು ತಿಂಗಳ ಅವಧಿಯಲ್ಲಿಯೂ ಉಣ್ಣೆ ಉತ್ತಮಗುಣಮಟ್ಟದ್ದಾಗಿಯೇ ಉಳಿಯ ಬೇಕೆಂದರೆ ಅದಕ್ಕೆ ಮೇಲಿಂದ ಮೇಲೆ ಡಾಂಬರು ಗುಳಿಗೆಯನ್ನು ಹಾಕಿ ಹುಳು ಹತ್ತದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರಬೇಕು.

**೧.೧. ಉಣ್ಣೆಯ ವರ್ಗೀಕರಣ:** ಉಣ್ಣೆ ಸಂಗ್ರಹಣೆಯ ನಂತರ ಸಂಗ್ರಹಿಸಿದ ಎಲ್ಲ ಉಣ್ಣೆಯೂ ಕಂಬಳಿ ನೇಯ್ಗೆಗೆ ಯೋಗ್ಯವಾಗುತ್ತದೆಂದು ಹೇಳಲಾಗುವುದಿಲ್ಲ. ಹಾಗಾಗಿಯೇ ಉಣ್ಣೆ ಸಂಗ್ರಹಿಸಿದ ನಂತರದಲ್ಲಿ ಮಾಡುವ ಮಹತ್ವದ ಕೆಲಸವೆಂದರೆ ಉಣ್ಣೆಯ ವರ್ಗೀಕರಣ. ಉಣ್ಣೆಯನ್ನು ಅದರ ಉತ್ಕೃಷ್ಟತೆ ಹಾಗೂ ಬಣ್ಣಕ್ಕನುಗುಣವಾಗಿ ಬೇರ್ಪಡಿಸುವರು. ಬೇರ್ಪಡಿಸಿದ ನಂತರ ಉಳಿದ ಮಿಶ್ರವರ್ಗದ ಉಣ್ಣೆಯನ್ನು ಈಗಿನ ಕಾಲದಲ್ಲಿ ಮಿಲ್ಲಿಗೆ ಕಳಿಸಲಾಗುತ್ತದೆ. ಕಂಬಳಿ ಗೃಹ ಕೈಗಾರಿಕೆಯಾಗಿದ್ದಲ್ಲಿ ಮಿಶ್ರವರ್ಗದ ತುಪ್ಪಳ ಬಳಕೆಗೊಳ್ಳದಿದ್ದರೂ ಈ ಉದ್ಯಮ ಯಾಂತ್ರೀಕರಣಗೊಂಡೆಡೆಗಳಲ್ಲಿ ಮಿಶ್ರವರ್ಗದ ತುಪ್ಪಳವನ್ನು ಖರೀದಿಸಿ ಸಂಸ್ಕರಿಸಿ ಉಪಯೋಗಿಸಲಾಗುತ್ತದೆ.

**೧.೨. ಹಂಜಿ ಮಾಡುವುದು:** ತುಪ್ಪಳದ ವರ್ಗೀಕರಣದ ನಂತರದಲ್ಲಿ ತೆಗೆದುಕೊಂಡ ಉಣ್ಣೆಯನ್ನು ಹಿಂಜಿ ಹಂಜಿ ಮಾಡುವುದು ಕಂಬಳಿ ತಯಾರಿಕೆಯಲ್ಲಿನ ಮುಖ್ಯ ಕೆಲಸ. ಈ ಕಾರ್ಯವನ್ನು ಕಂಬಳಿ ನೇಕಾರರ ಮನೆಯ ಹೆಣ್ಣು ಮಕ್ಕಳೇ ಮಾಡುವರು. ಇದಕ್ಕೆ 'ಕಾರ್ಡಿಂಗ್' ಎಂತಲೂ ಕರೆಯುವರು. ಉಣ್ಣೆಯನ್ನು ಹಿಂಜುವುದರಿಂದ ತುಪ್ಪಳದಲ್ಲಿನ ಸಿಕ್ಕು, ತೊಳೆಗಳು ಬಿಟ್ಟುಕೊಂಡು ಮೃದು, ಶುದ್ಧವಾದ ಹಂಜಿ ಸಿದ್ಧಗೊಳ್ಳುತ್ತದೆ. ಹೀಗೆ ಶುದ್ಧವಾದ ಸರಿಸುಮಾರು ೧.೫ ಕೆ.ಜಿ. ತುಪ್ಪಳಕ್ಕೆ ಒಂದು ಕಂಬಳಿ ರೂಪುಗೊಳ್ಳುತ್ತದೆ. ತುಪ್ಪಳ, ನೇಯ್ಗೆಗೆ ಯೋಗ್ಯವಾದ ನಂತರ ಕಂಬಳಿ ತಯಾರಿಕೆಯ ಮುಂದಿನ ಹಂತ ನೂಲುವ ಕಾರ್ಯಕ್ಕೆ ಮುನ್ನಡೆಯುತ್ತದೆ.

### ೨. ನೂಲುವಿಕೆ

ಶುದ್ಧಗೊಂಡ ಹಂಜಿಯಲ್ಲಿನ ಸ್ವಲ್ಪ ಸ್ವಲ್ಪ ಭಾಗವನ್ನು ಕೈಯಲ್ಲಿ ತೆಗೆದುಕೊಂಡು 'ಚೆಕ್'ಗಳಾಗಿ ಮಾಡಿಕೊಳ್ಳುವರು. ಚೆಕ್ ಎಂದರೆ ಸುಮಾರು ನಾಲ್ಕು ಬಟ್ಟು ಅಳತೆಯ ಉಣ್ಣೆಯನ್ನು ಕೈಯಲ್ಲಿ ತೆಗೆದುಕೊಂಡು ನೂಲುವುದಕ್ಕೆ ಅನುಕೂಲವಾಗುವಂತೆ ಸಿದ್ಧಪಡಿಸಿಕೊಳ್ಳುವುದು. ಮುಂಚಿನ ಕಾಲದಲ್ಲಿ ಹಂಜಿಗಳನ್ನು ತೊಡೆಗದಿರಿನಿಂದ ನೂಲುತ್ತಿದ್ದುದಾಗಿ ಜನಪದ ಕಾವ್ಯಗಳಲ್ಲಿ ಬರುತ್ತದೆ.

'ತೊಡೆಗದಿರಿಂ ನೂತು ಹಿಡಿದಾರು ಮೊಳನಿಕ್ಕಿ' ಎಂಬಂತಹ ಉಲ್ಲೇಖ ದೊರೆಯುತ್ತದೆ. ಇದು ಬಹಳ ಶ್ರಮದಾಯಕ ಮತ್ತು ನಿಧಾನಗತಿಯಲ್ಲಾಗುವ ಕೆಲಸವಾಗಿತ್ತು. ನಂತರ ಯಾವಾಗ ನೂಲಿನ

ಇತಿಹಾಸದಲ್ಲಿ ಚರಕ ಕಾಲಿಟ್ಟಿತ್ತೋ ಆಗ ಕ್ರಾಂತಿಯೇ ಉಂಟಾಯಿತು. ನೂಲು ತೆಗೆಯಲು ಬಳಸುವ ಚರಕವನ್ನು ಸುಮಾರು ೬೦೦ ವರ್ಷಗಳಷ್ಟು ಹಿಂದೆ ಭಾರತೀಯರೇ ಕಂಡು ಹಿಡಿದರೆಂಬ ಅಭಿಪ್ರಾಯವಿದೆ. ಆದರೆ ಅದನ್ನು ಕಂಡುಹಿಡಿದವರ ಬಗ್ಗೆಯಾಗಲಿ ಅಥವಾ ಅದರ ಬಗ್ಗೆ ಮತ್ತಾವುದೆ ಬಗೆಯಾದ ಮಹತ್ವದ ಮಾಹಿತಿಗಳೇನೂ ದೊರೆಯದೇ ಇರುವುದು ವಿಷಾದದ ಸಂಗತಿ. ಚರಕದಲ್ಲಿ ತಿರುಗಿಸಲು ದೊಡ್ಡ ಚಕ್ರದ ಬಳಕೆ ಮತ್ತು ಅದಕ್ಕೆ ತಕ್ಕ ಕದಿರನ್ನು ಬಳಸುವುದರಿಂದ ಚರಕವನ್ನು ವೇಗವಾಗಿ ತಿರುಗಿಸುವುದಲ್ಲದೇ ಹೆಚ್ಚೆಚ್ಚು ನೂಲು ತೆಗೆಯಲೂ ಕೂಡ ಸಾಧ್ಯವಾಗುತ್ತದೆ. ನೂಲುವ ಕಾರ್ಯದಲ್ಲಿ ಚರಕ ಬಹುಮುಖ್ಯ ಸ್ಥಾನವನ್ನು ಪಡೆಯುವುದರಿಂದ ಇದರ ಬಹುಕಾಲದ ಬಾಳಿಕೆಗೆ ಯೋಗ್ಯವಾಗುವಂಥ ಸಾಗವಾನಿ ಕಟ್ಟಿಗೆಯಿಂದಲೇ ಚರಕವನ್ನು ಮಾಡಿಸುತ್ತಾರೆ.

ಸಾಮಾನ್ಯವಾಗಿ ನೂಲುವ ಕೆಲಸವನ್ನು ಕಂಬಳಿ ನೇಕಾರರ ಮನೆಯ ಹೆಣ್ಣು ಮಕ್ಕಳೇ ಮಾಡುವರು. ಮನೆಗೆಲಸದ ನಂತರದ ಹೊತ್ತಿನಲ್ಲಿ ಈ ಹೆಣ್ಣು ಮಕ್ಕಳು ನೂಲುವ ಕಾರ್ಯದಲ್ಲಿ ನಿರತರಾಗುವರು. ಮಗ್ಗಗಳು ಮನೆಯ ಹತ್ತಿರವೇ ಇರುವುದರಿಂದ ಸಹಜವಾಗಿಯೇ ಮನೆಮಂದಿಯೆಲ್ಲ ಈ ಉದ್ಯೋಗದಲ್ಲಿ ತೊಡಗಿಕೊಳ್ಳುವರು. ಕೆಲವೊಮ್ಮೆ ಮನೆಯವರಿಗೆ ನೂಲುವುದು ಸಾಧ್ಯವಾಗದಿದ್ದ ಪಕ್ಷದಲ್ಲಿ ಬೇರೆಯವರಿಂದ ಕೂಲಿ ಕೊಟ್ಟು ನೂಲಿಸುವುದೂ ರೂಢಿಯಲ್ಲಿದೆ. ಮತ್ತೆ ಕೆಲಸಾರಿ ಕುರಿಸಾಕಿ ತುಪ್ಪಳ ಸಂಗ್ರಹಿಸಿದವರೂ ಕೂಡ ನೂಲು ಮಾಡಿಕೊಂಡು ಬಂದು ನೇಕಾರರಿಗೆ ಕೂಲಿಕೊಟ್ಟು ಕಂಬಳಿ ನೇಯಿಸಿಕೊಳ್ಳುವುದೂ ಉಂಟು. ಚರಕದಿಂದ ನೂಲು ತೆಗೆದದ್ದನ್ನು ಲೋಹದ ಕಟ್ಟಿಗೆ ಸುತ್ತಿದಾಗ 'ಕುಕ್ಕಡಿ'ಯಾಗುತ್ತದೆ. ಸರಾಸರಿ ೧೪ ಕುಕ್ಕಡಿಗೆ ಒಂದು ಕಂಬಳಿ ಸಿದ್ಧಗೊಳ್ಳುತ್ತದೆ.

**೨.೧. ಹಾಸು ಹೊಯ್ಯುವುದು:** ಕುಕ್ಕಡಿ ಸಿದ್ಧವಾದ ಮೇಲೆ 'ಹಾಸು ಹೊಯ್ಯು'ವರು. ಹಾಸುಮಣೆಯ ಮೇಲೆ 'ಹೂರಣಗಿ'ಯ ಸಹಾಯದಿಂದ ಹಾಸನ್ನು ಹೊಯ್ಯುವರು. ಈ ಹೂರಣಗಿಯು ಮುಂಚಿನ ಕಾಲಕ್ಕೆ ಎಲುಬಿನದಾಗಿರುತ್ತಿದ್ದು ಈಗ ಕಬ್ಬಿಣದ ಹೂರಣಗಿಯನ್ನು ಉಪಯೋಗಿಸುವರು. ಹಾಸು ಹೊಯ್ಯುವದು ಎಂದರೆ ಬಿಡಿ ಬಿಡಿಯಾಗಿ ಒಂದರ ಪಕ್ಕದಲ್ಲಿ ಒಂದು ನೂಲಿನ ಎಳೆಗಳು ಬರುವಂತೆ ಜೋಡಿಸುವುದು. ಆರು ಗಣೆ ಎಂಬ ಏಳು ಗೂಟಗಳನ್ನುಳ್ಳ ಹಲಗೆಯಂಥ ಸಾಧನದ ಮೇಲೆ ಹಾಸು ಹೊಯ್ಯಲಾಗುತ್ತದೆ. ಸುಮಾರು ಒಂಬತ್ತು ಮೊಳ ಉದ್ದದ ೨೨೦ರಿಂದ ೨೪೦ ಜೊತೆ ದಾರಗಳನ್ನುಳ್ಳ ಹಾಸನ್ನು ಹಾಸುಮಣೆ ಮೇಲೆ ಹೊಯ್ಯಲಾಗುತ್ತದೆ. ನೂಲಿನ ಎಳೆಯ ಸಣ್ಣದಪ್ಪ ಕಂಬಳಿಯ ಉದ್ದ ಅಗಲಗಳಿಗನುಸಾರವಾಗಿ ಒಂದು ಕಂಬಳಿಗೆ ಇಂತಿಷ್ಟು ಹುಂಜ ಬೇಕಾಗುತ್ತದೆಯೆಂಬ ಅಂದಾಜಿನ ಮೇಲೆ ಹಾಸು ಹೊಯ್ಯುವರು. ೮೦ ನೂಲಿನ ಎಳೆಗೆ ಒಂದು 'ಹುಂಜ'ವಾಗುತ್ತದೆ. ಒಂದು ಸಾಧಾರಣ ಅಳತೆಯ ಹೊದೆಯುವ ಕಂಬಳಿಗೆ ೧೮ ಹುಂಜಗಳು ಬೇಕಾಗುತ್ತವೆ. ಹೀಗೆ ಹಾಸುಹೊಯ್ಯುವ ಮೂಲಕ ನೂಲನ್ನು ತಮಗೆ ಬೇಕಾದ ರೀತಿಯಲ್ಲಿ ಹೊಂದಿಸಿಕೊಳ್ಳಲಾಗುತ್ತದೆ. ಹಾಸುಹೊಯ್ದು ಹುಂಜ ಸಿದ್ಧಗೊಂಡ ಮೇಲೆ ಕಂಬಳಿ ತಯಾರಿಕೆಯು ಉಂಕೆಯ ಕೆಲಸಕ್ಕೆ ಅಣಿಯಾಗುತ್ತದೆ.

### ೩. ಉಂಕೆ ಮಾಡುವುದು

ಈಗಾಗಲೇ ಸಿದ್ಧಗೊಂಡಿರುವ ಹುಂಜದಲ್ಲಿನ ನೂಲಿನ ಎಳೆಗಳನ್ನು ಬಿಡಿಬಿಡಿಯಾಗಿ ಒಂದರ ಪಕ್ಕದಲ್ಲೊಂದು ಬರುವಂತೆ ಜೋಡಿಸಿ 'ಗಂಜಿ ಸರಿ' ಹಚ್ಚುವುದೇ ಉಂಕೆ ಮಾಡುವುದು.

**ಹುಣಸೆ ಗಂಜಿ ಮಾಡುವ ವಿಧಾನ:** ಮೊದಲು ಹುಣಸೆ ಬೀಜಗಳನ್ನು ಹಿಂದಿನದಿನ ರಾತ್ರಿಯೇ ಕುಟ್ಟಿ ನೆನೆಹಾಕುವರು. ಕರಿ ಕಂಬಳಿಗಾದರೆ ಸಣ್ಣಗೆ ಕುಟ್ಟಿದ ನೆನೆದ ಹುಣಸೆ ಬೀಜಗಳನ್ನು ಒರಳಿನಲ್ಲಿ ರುಬ್ಬುವರು. ಬಿಳಿ ಕಂಬಳಿಗಾದರೆ 'ದಪ್ಪನಾಗಿ ಕುಟ್ಟಿ ನೆನೆಸಿದ ಹುಣಸೆ ಬೀಜಗಳನ್ನು ತೆಗೆದುಕೊಂಡು ಅದರ ಮೇಲಿನ ಸಿಪ್ಪೆ ಹೋಗುವಂತೆ ಕಲ್ಲಿಗೆ ಹಾಕಿ ತೇಯಲಾಗುತ್ತದೆ. ನಂತರ ಒರಳಿಗೆ ಹಾಕಿ ರುಬ್ಬುವರು. ಹೀಗೆ ನುಣ್ಣಗೆ ರುಬ್ಬಿದ ಮಿಶ್ರಣವನ್ನು ನೀರಿನಲ್ಲಿ ಕಲಸಿ ಒಲೆಯ ಮೇಲೆ ಒಂದೇ ಉರಿಯಲ್ಲಿಟ್ಟು ಹದವಾದ ರೀತಿಯಲ್ಲಿ ಗಂಟಾಗದಂತೆ ತಿರುವುತ್ತಿರಬೇಕು. ಎರಡು ಮೂರು ಗಂಟೆಗಳ ಕಾಲ ಚೆನ್ನಾಗಿ ಕುದಿಸಿದಾಗ ಹದವಾಗಿ ಬೆಂದು ಮುದ್ದೆಯಂತಾಗುತ್ತದೆ. ಈ ಮುದ್ದೆಯನ್ನು ಮತ್ತೆ ನೀರಿಗೆ ಹಾಕಿ ಕಲಸಿದರೆ ಅಂಟು ಅಂಟಾದ ಗಂಜಿಯಂಥ ಸರಿ ಸಿದ್ಧವಾಗುತ್ತದೆ. ಇದನ್ನೇ ಹುಣಸೆ ಅಂಬಲಿ, ಗಂಜಿ ಸರಿ ಎಂದು ಕರೆಯಲಾಗುತ್ತದೆ. ಈ ತೆರನಾಗಿ ಸಿದ್ಧಪಡಿಸಿಕೊಂಡ ಗಂಜಿ ಸರಿಯನ್ನು ಬಿಡಿಬಿಡಿಯಾಗಿ ಜೋಡಿಸಿಕೊಂಡ ನೂಲಿನ ಎಳೆಗಳಿಗೆ ಕುಂಚಿಗೆ ಎನ್ನುವ ಉಪಕರಣದ ಸಹಾಯದಿಂದ ಉಂಕೆ ಮಾಡುವರು. ಉಣ್ಣೆ ನೂಲಿಗೆ ಗಂಜಿ ಸರಿ ಹಚ್ಚುವುದರಿಂದ ಅಂಟು ಅಂಟಾದ ತುಪ್ಪಳ ಜಿಡ್ಡನ್ನು ಕಳೆದುಕೊಂಡು ಮೃದುವಾಗುತ್ತದೆ. ಈ ರೀತಿಯಲ್ಲಿ ಉಂಕೆ ಮಾಡಿ ಸಿದ್ಧಪಡಿಸಿಕೊಂಡು ಎರಡು ಉಂಕೆ ಪಟ್ಟಿಗಳನ್ನು ಸೇರಿಸಿ ಬೆಜ ಹೊಡೆಯುವರು. ಬೆಜ ಹೊಡೆದುಕೊಂಡು ಸಿದ್ಧವಾದ ಉಂಕೆ ಪಟ್ಟಿಗಳನ್ನು ಮಗ್ಗಕ್ಕೇರಿಸುವುದೇ ಕಂಬಳಿ ತಯಾರಿಕೆಯ ಮುಂದಿನ ಹಂತ.

### ೪. ನೇಯ್ಗೆ

ಉಂಕೆ ಮಾಡಿಕೊಂಡ ನೂಲನ್ನು ಮಗ್ಗಕ್ಕೆ ಏರಿಸಿದ ನಂತರದ ಮಹತ್ವದ ಕೆಲಸವೆಂದರೆ ನೇಯುವುದು. ನೂಲಿನ ಎಳೆಗಳನ್ನು ಜೋಡಿಸಿ ಮಗ್ಗದಲ್ಲಿಟ್ಟು ನೇಯಲು 'ಹೋಳು' ಎಂಬ ಸಾಧನವನ್ನು ಬಳಸಲಾಗುತ್ತದೆ. ಇವು ೯ ಮೊಳ ಉದ್ದ ೩ ಮೊಳ ಅಗಲ ಅಳತೆಯವುಗಳಿರುತ್ತವೆ. ನೇಯುವಾಗ ಅಣೆಗಳನ್ನು ಬಿಡಿಸಿ ಗಂಜಿಯಲ್ಲಿ ಅದ್ದಿ ಸಿದ್ಧಗೊಂಡ ಹುರಿಯನ್ನು ಲಾಳಿಯ ಮೂಲಕ ಸೇರಿಸಿ ಮತ್ತೆ ಅಣೆಯನ್ನು ಕೂಡಿಸಿ 'ಬೇವು' ಎಂಬ ಸಾಧನದಿಂದ ಒತ್ತಿ ಹುರಿಗಳನ್ನು ಹತ್ತಿರ ಸೇರಿಸುತ್ತ ಹೋಗುವರು. ಈ ತೆರನಾದ ನೇಯ್ಗೆ ಕಂಬಳಿ ಗುಣಮಟ್ಟವನ್ನು ನಿರ್ಧರಿಸುವಲ್ಲಿ ಮಹತ್ವದ ಪಾತ್ರವನ್ನಾಡುತ್ತದೆ. ಕಾರಣ ನೇಯ್ಗೆ ಯಾವ ಮಟ್ಟದ್ದಾಗಿರುತ್ತದೆಯೋ ಆ ಗುಣಮಟ್ಟದ ಕಂಬಳಿಯನ್ನು ಪಡೆಯಬಹುದಾಗಿದೆ. ನೇಯ್ಗೆ ಮುಗಿದರೆ ಕಂಬಳಿ ಪ್ರಕ್ರಿಯೆ ಪೂರ್ಣವಾದಂತೆಯೇ ಆದರೂ ಅದಕ್ಕೊಂದು ವ್ಯವಸ್ಥಿತ ರೂಪು ಕೊಡುವುದನ್ನು ಕಂಬಳಿ ತಯಾರಿಕೆಯ ಹಂತಗಳಲ್ಲಿಯೇ ಗುರುತಿಸಿಕೊಳ್ಳಬಹುದು.

## ೫. ವ್ಯವಸ್ಥಿತ ಆಕಾರ ಕೊಡುವುದು

ನೇಯ್ದು ಸಿದ್ಧಗೊಂಡ ಕಂಬಳಿಯನ್ನು ನೇಕಾರರು ಹೊಳೆಗೋ ಕೆರೆಗೋ ಒಯ್ದು ಚೆನ್ನಾಗಿ ಗಂಜಿ ಹೋಗುವಂತೆ ಜಾಲಾಡಿ ತೊಳೆಯುವರು. ಯಾವುದೇ ಉಣ್ಣೆ ಉತ್ಪನ್ನವನ್ನು ನೀರಿಗೆ ಹಾಕಿದಾಗ ಮುದುಡಿಯಾಗುವುದು ಸಹಜ. ಹೀಗೆ ನೀರಿಗೆ ಹಾಕಿದಾಗೊಮ್ಮೆ ಆ ಕಂಬಳಿ ಮುದುಡಿಯಾಗುವುದನ್ನು ಶಾಶ್ವತವಾಗಿ ಪರಿಹರಿಸಿಕೊಳ್ಳುವ ಮಾರ್ಗವನ್ನು ಜನಪದರು ಕಂಡುಕೊಂಡಿರುವರು. ಅದನ್ನೇ 'ಜಗ್ಗ್ಯಾ ಕುವುದು' ಎನ್ನುವರು. ಮೊದಲ ಬಾರಿ ನೀರಿಗೆ ಹಾಕಿದ ಕಂಬಳಿಯನ್ನು ಮನೆಗೆ ತಂದು ಜಗ್ಗ್ಯಾಕುವುದಕ್ಕಾಗಿ ನಿರ್ದಿಷ್ಟಪಡಿಸಿದ ಸ್ಥಳದಲ್ಲಿ ಅಂದರೆ ಮನೆಯ ಅಥವಾ ಮಗ್ಗದ ಆಸುಪಾಸಿನಲ್ಲೇ ವಿಶಾಲವಾದ ಬಯಲು ಪ್ರದೇಶದಲ್ಲಿ ಮರಕ್ಕೆ ಹಗ್ಗದೊಂದಿಗೆ ಗಳ ಕಟ್ಟಿರುತ್ತಾರೆ. ಕಟ್ಟಿದ ಗಳಕ್ಕೆ ಕಂಬಳಿಯನ್ನು ಚೆನ್ನಾಗಿ ಹಾಕಿ ಜೋತು ಬಿಟ್ಟು ಎರಡೂ ಕಡೆಯ ದಂಡೆಗೆ ತೂಕದ ನಾಲ್ಕೈದು ಕಲ್ಲುಗಳನ್ನಿಡುವರು. ಹೀಗೆ ಕಲ್ಲುಗಳನ್ನಿಟ್ಟಾಗ ಮುದುಡಿಯಾದ ಕಂಬಳಿ ಇಸ್ತ್ರಿ ಮಾಡಿದಂತಾಗುವುದಲ್ಲದೇ ಅದು ಮತ್ತೆಂದೂ ನೀರಿಗೆ ಹಾಕಿದಾಗ ಮುದುಡಿಯಾಗದು. ಜಗ್ಗ್ಯಾಕುವುದರಿಂದ ನೀಟಾದ ಕಂಬಳಿಯನ್ನು ಚೆನ್ನಾಗಿ ಮಡಿಕೆ ಮಾಡಿ ಅದರ ಮೇಲೆ ಸುಮಾರು ೨೦ರಿಂದ ೨೫ ಕೆ.ಜಿ. ತೂಕದ ಕಲ್ಲುಗಳನ್ನಿಡುವರು. ಇಷ್ಟು ಮಡಿಕೆ ಮಾಡಿಟ್ಟರೆ ಕಂಬಳಿ ಬಳಕೆಗೆ, ಮಾರಾಟಕ್ಕೆ ಸಿದ್ಧಗೊಂಡಂತೆ.

ಉಣ್ಣೆಯಿಂದ ಕಂಬಳಿ ಸಿದ್ಧವಾಗುವವರೆಗಿನ ಬಗೆಯನ್ನು ಉಣ್ಣೆ ಸಂಗ್ರಹಣೆಯಿಂದ ಮೊದಲ್ಗೊಂಡು ಕಂಬಳಿಯನ್ನು ಮಡಿಕೆ ಮಾಡಿಡುವವರೆಗೆ ಅನೇಕ ಹಂತಗಳಲ್ಲಿ ಗಮನಿಸಬಹುದಾಗಿದೆ. ಮೊದಲು ಕಂಬಳಿಗಳು ಸ್ವಾಭಾವಿಕ ಬಣ್ಣದಲ್ಲಿ ಮಾತ್ರ ದೊರೆಯುತ್ತಿದ್ದವು. ಕಾರಣ ಉಣ್ಣೆ ಅಷ್ಟು ಸಲೀಸಾಗಿ ಕೃತಕ ಬಣ್ಣದೊಂದಿಗೆ ಹೊಂದಿಕೊಳ್ಳುವುದಿಲ್ಲ. ಇದನ್ನೇ ಸೂರದಾಸ ಎಂಬ ಭಕ್ತಕವಿ 'ಎ ಕಾಲಿ ಕಂಬಲ್ ಐಸೀ ಹೈ ಇಸ್ ಪರದೂಜಾ ರಂಗ ಚಡತಾ ನಹೀ' ಎಂದು ಉಣ್ಣೆಯ ಗುಣಧರ್ಮವನ್ನು ಹೇಳುತ್ತಾನೆ. ಮೊದಲಿನ ಕಂಬಳಿಗಳು ಎಷ್ಟು ಕಚ್ಚಾರೂಪದಲ್ಲಿರುತ್ತಿದ್ದವೆಂದರೆ ಕಂಬಳಿಯಾಗಿ ಸಿದ್ಧಗೊಂಡರೂ ಅವುಗಳಲ್ಲಿ ಕುರಿಯ ವಾಸನೆ ಬರುತ್ತಿದ್ದವು ಎಂದು ಹೇಳುತ್ತಾರೆ.[೪] ಆದರೆ ಇಂದು ಉಣ್ಣೆಯಿಂದ ತಯಾರಾಗಿದೆ ಎಂಬುದಕ್ಕೆ ಸಂಶಯಬರುವಷ್ಟು ನಯವಾದ ಕಂಬಳಿಗಳು ಸಿದ್ಧಗೊಳ್ಳುತ್ತಿವೆ.

ಕಂಬಳಿ ಸಿದ್ಧಗೊಂಡು ಮಾರಾಟಕ್ಕಿಟ್ಟಾಗ ಎರಡೂ ದಂಡೆಗೆ ನೂಲಿನ ಎಳೆಗಳು ಹಾಗೇ ಉಳಿದಿರುತ್ತವೆ. ಕಂಬಳಿಯನ್ನು ಕೊಂಡವರು ತುಂಬ ದಿನ ಬಾಳಿಕೆ ಬರಲೆಂದು ಅವುಗಳಿಗೆ ಕರಿಕಟ್ಟುವರು. ಕರಿಕಟ್ಟುವ ಉದ್ಯೋಗವನ್ನೇ ಮಾಡುವ ಪರಿಣತರಿರುತ್ತಾರೆ. ಹೆಚ್ಚಾಗಿ ಕರಿಕಟ್ಟುವವರೂ ಕುರುಬರೇ ಆಗಿರುತ್ತಾರೆ. ಕರಿಕಟ್ಟುವುದೆಂದರೆ ಕಂಬಳಿಯ ಎರಡೂ ಕೊನೆಯಲ್ಲಿ ಹಾಗೇ ಉಳಿದ ನೂಲಿನ ಎಳೆಗಳನ್ನು ಕೂಡಿಸಿ ಬಣ್ಣದ ದಾರದಿಂದ ಅಂದವಾಗಿ ಹೆಣೆದು ಕೊನೆಯಲ್ಲಿ ಗೊಂಡೆಯೊಂದನ್ನು ಕಟ್ಟುತ್ತಾರೆ. ಹೀಗೆ ಅತ್ಯಂತ ಕಲಾತ್ಮಕವಾಗಿ ಕರಿಕಟ್ಟುವ ಕಲಾವಿದರು ಕುರುಬ ಜನಾಂಗದಲ್ಲಿ ಇಂದಿಗೂ ಇರುವರು. ಅವರು ಮನೆಮನೆಗೆ ಬಂದು

ಕಂಬಳಿಗಿಂತಿಷ್ಟರಂತೆ ಹಣ ಪಡೆದು ಕರಿಕಟ್ಟಿಕೊಡುತ್ತಾರೆ. ಈ ಕರಿಕಟ್ಟುವ ಕಲಾವಿದರು ಊರಿಂದೂರಿಗೂ ಅಲೆದಾಡಿ ಉದ್ಯೋಗ ಅರಸುವರು.

ಸಾಮಾನ್ಯವಾಗಿ ಹೀಗೆ ಸಿದ್ಧಗೊಳ್ಳುವ ಕಂಬಳಿಗಳಲ್ಲಿ ಅಲ್ಪಸ್ವಲ್ಪ ತುಪ್ಪಳ ನೇಯ್ಗೆಯ ವ್ಯತ್ಯಾಸದೊಂದಿಗೇ ಅನೇಕ ಬಗೆಯ ಕಂಬಳಿಗಳನ್ನು ಉತ್ಪಾದಿಸಲಾಗುತ್ತದೆ. ಅವುಗಳಲ್ಲಿ ಮುಖ್ಯವಾಗಿ ಹುರಿಗಂಬಳಿ, ಉಜ್ಜುಗಂಬಳಿ, ಗದ್ದುಗೆ ಧಾವಳಿ, ಕರಿಯಕಂತೆ, ರತ್ನಗಂಬಳಿ, ಜಮಖಾನೆ, ಸಣ್ಣಕಂಬಳಿ-ಶಾಲು-ಸಕಲಾತಿಗಳು ಹೀಗೆ ವೈವಿಧ್ಯಮಯವಾದ ಕಂಬಳಿಗಳನ್ನು ಸಿದ್ಧಪಡಿಸಲಾಗುತ್ತದೆ.

**೧. ಹುರಿಗಂಬಳಿ**

ಇದನ್ನು ಹೆಗ್ಗಂಬಳಿ ಎಂತಲೂ ಕರೆಯುವರು. ಅಷ್ಟೊಂದು ಮೃದುವಲ್ಲದ ಉಣ್ಣೆಯಿಂದ ಸ್ವಲ್ಪ ದಪ್ಪನಾದ ನೂಲಿನಿಂದ ಮಾಡಿದ ನೇಯ್ಗೆ ಈ ಹುರಿ ಗಂಬಳಿಯದು. ನೇಯ್ಗೆಯ ನೂಲು ಹುರಿಯ ಗಾತ್ರದಷ್ಟೇ ಇರುವುದರಿಂದ ಇದನ್ನು ಹುರಿಗಂಬಳಿ ಎನ್ನುವರು. ನಾಲ್ಕು ಹೋಳುಗಳನ್ನು ಕೂಡಿಸಿ ಈ ಕಂಬಳಿಯನ್ನು ತಯಾರಿಸುತ್ತಾರೆ. ಇದನ್ನು ನೇಯುವಾಗ ಹೊಕ್ಕನ್ನು ಹುಣಸೆ ಸರಿಯಲ್ಲಿಯೇ ನೆನೆಸಿ ಉಪಯೋಗಿಸುವರು. ಈ ಕಂಬಳಿಯನ್ನು ಸಾಮಾನ್ಯ ಬಳಕೆಗಾಗಿ ಅಂದರೆ ಹಾಸಲು, ಹೊದೆಯಲು ಅಲ್ಲದೇ ಉಣ್ಣೆ ವಿನಿಮಯ, ಒಕ್ಕಲುತನದ ಬಳಕೆಗೂ ಕೂಡ ಬಳಸುವರು.

**೨. ಉಜ್ಜುಗಂಬಳಿ**

ಉಜ್ಜುಗಂಬಳಿ ಮಾಡಲು ಬಂಡದ ರಾಶಿಯಲ್ಲಿನ ಮೃದುವಾದ ತುಪ್ಪಳವನ್ನು ಆರಿಸಿಕೊಳ್ಳಲಾಗುತ್ತದೆ. ಈ ಕಂಬಳಿಗೆ ಬೇಕಾಗುವ ಉಣ್ಣೆ ಸಾಮಾನ್ಯವಾಗಿ ಆ ಕುರಿಯ ಮೊದಲನೆಯ ಕತ್ತರಿಯದಾಗಿದ್ದು ಕುರಿಯ ಕತ್ತು ಹಾಗೂ ಬೆನ್ನಿನ ಮೇಲಿನ ಉಣ್ಣೆಯನ್ನು ಬಳಸಲಾಗುತ್ತದೆ. ಸುಮಾರು ಒಂದು ಮಣದಷ್ಟಿರುವ ಉಣ್ಣೆರಾಶಿಯಲ್ಲಿ ಇಷ್ಟು ಮೃದುವಾದ ತುಪ್ಪಳ ದೊರೆಯುವುದು ಕೇವಲ ಮೂರುನಾಲ್ಕು ಪೌಂಡ್ ಮಾತ್ರ. ಈ ತೆರನಾದ ಉಣ್ಣೆಯಿಂದ ಸಿದ್ಧಗೊಳ್ಳುವ ಉಜ್ಜುಗಂಬಳಿಯನ್ನು ಮಾಡುವ ಕಲೆ ಎಲ್ಲ ಕಂಬಳಿ ನೇಕಾರರಿಗೂ ಬರುವುದಿಲ್ಲ. ಅದರಲ್ಲಿ ನಿಷ್ಣಾತರಾದ ಕೆಲವು ಜನ ಕಸುಬುದಾರರಿಗೆ ಮಾತ್ರ ಈ ಉಜ್ಜುಗಂಬಳಿಯನ್ನು ನೇಯುವ ಕಲೆ ರೂಢಿಗತವಾಗಿರುವುದು.

ಆರಿಸಿ ತೆಗೆದ ಅಪ್ಪಟ ಮೃದು ತುಪ್ಪಳವನ್ನು ಹಿಂಜಿ ಹಂಜಿ ಮಾಡಬೇಕು. ಈ ಹಂಜಿಯಿಂದ ಮೃದುವಾದ ಹೆಚ್ಚು ಹುರಿಯಲ್ಲದ ಸಡಿಲವೂ ಅಲ್ಲದ, ಹೆಚ್ಚು ಸಣ್ಣವಲ್ಲದ ದಪ್ಪವೂ ಅಲ್ಲದ ಒಂದು ಮಧ್ಯಮ ತೆರನಾದ ನೂಲನ್ನು ತೆಗೆಯಬೇಕು. ಈ ಕಂಬಳಿ ತಯಾರಿಕೆಯಲ್ಲಿ ಈ ತೆರನಾದ ನೂಲು ತೆಗೆಯುವುದೇ ಬಹು ಚಾಣಾಕ್ಷತೆಯ ಕೆಲಸ. ನೂಲು ಎಷ್ಟರಮಟ್ಟಿಗೆ ಚೆನ್ನಾಗಿ ಬರುತ್ತದೆಯೋ ಅಷ್ಟರಮಟ್ಟಿಗೆ ಕಂಬಳಿಯೂ ಉತ್ತಮವಾಗುತ್ತದೆ. ಹೀಗೆ ಸೂಕ್ಷ್ಮವಾಗಿ ನೂಲನ್ನು ತೆಗೆದ ನಂತರ ಆ ಕಂಬಳಿಯ ನೇಯ್ಗೆಗೂ

ಒಂದು ವಿಶೇಷ ಕ್ರಮವಿದೆ. ನೇಯ್ಗೆಗೆ ಸಿದ್ಧವಾದ ಹಾಸನ್ನು ಬೇಕಾದ ಉಪಕರಣಗಳಿಂದ ಮಗ್ಗಕ್ಕೆ ಜೋಡಿಸಿ ಹೊಕ್ಕಿನ ಎಳೆಗಳನ್ನು ಒಂದು ಕ್ರಮಬದ್ಧ ರೀತಿಯಲ್ಲಿ ನೇಯುವರು. ಈ ನೇಯ್ಗೆಯೂ ಕೂಡ ತುಂಬ ಜಾಗರೂಕತೆಯಿಂದ ಮಾಡಬೇಕಾದ ಕೆಲಸ. ನೇಯ್ದ ಹೋಳುಗಳು ೯ ಮೊಳ ಉದ್ದ ೨.೫ ಮೊಳ ಅಗಲವಿರುತ್ತವೆ. ಇಷ್ಟು ಅಳತೆಯಲ್ಲಿ ನೇಯ್ದ ಎರಡು ಹೋಳುಗಳನ್ನು ಸೇರಿಸಿ ಉಣ್ಣೆಯ ದಾರದಿಂದ ಹೊಲಿದಾಗ ಒಂದು ಕಂಬಳಿಯಾಗುತ್ತದೆ. ಈ ೯ ಮೊಳ ಉದ್ದ ೫ ಮೊಳ ಅಗಲದ ಕಂಬಳಿಯನ್ನು ಉಜ್ಜಿ ೬ ಮೊಳ ಉದ್ದ ೪ ಮೊಳ ಅಗಲಕ್ಕೆ ಇಳಿಸಲಾಗುತ್ತದೆ.[೫]

ಈಚಲು ಗರಿಗಳ ಸುತ್ತ ಇರುವ ಸೀಬಿನ ನಾರನ್ನು ತಂದು ಹಿಂಜಿ ಹದ ಮಾಡಿ ಹಗ್ಗದಂಥ ದಾರ ತೆಗೆದು ಚಚ್ಚೌಕಾಕಾರವಾಗಿ ಸುಮಾರು ನಾಲ್ಕು ಅಡಿ ಉದ್ದದ ನಾಲ್ಕುಮರದ ತುಂಡುಗಳನ್ನು ಜೋಡಿಸಿ ಅದರ ಮಧ್ಯ ನಾರಿನ ದಾರವನ್ನು ಒತ್ತಾಗಿ ಚಪ್ಪಟೆಯಂತೆ ಹೆಣೆಯುವರು. ಹೀಗೆ ಚೌಕಟ್ಟಿನಂತೆ ಕಾಣುವುದನ್ನು ಮೂರು ಅಡಿ ಎತ್ತರದಂತೆ ಒಂದೇ ಎತ್ತರದ ನಾಲ್ಕು ಕಂಬಗಳನ್ನು ಚೌಕಾಕಾರವಾಗಿ ಜೋಡಿಸಿ ಅದರ ಮೇಲಿಡಲಾಗುತ್ತದೆ. ನೇಯ್ದು ಸಿದ್ಧಗೊಂಡ ಕಂಬಳಿಯನ್ನು ಕುದಿಯುವ ನೀರಿನಲ್ಲಿ ಚೆನ್ನಾಗಿ ನೆನೆಸಿ ಹೊರಸಿನ ಮೇಲೆ ಹಾಕಿ ಎರಡೂ ದಂಡೆಗೆ ಇಬ್ಬಿಬ್ಬರಂತೆ ಬಲಿಷ್ಠರಾದ ನಾಲ್ಕುಜನ ಎದುರು ಬದುರಾಗಿ ನಿಂತು ಕಂಬಳಿಯನ್ನು ಉಜ್ಜುವರು. ನಡುನಡುವೆ ಕಂಬಳಿಯನ್ನು ಕುದಿಯುವ ನೀರಿನಲ್ಲಿ ಅದ್ದಿಕೊಂಡು ಉಜ್ಜುತ್ತಿರುತ್ತಾರೆ. ೯ ಮೊಳ ಉದ್ದ ೫ ಮೊಳ ಅಗಲದ ಕಂಬಳಿ ೬ ಮೊಳ ಉದ್ದ ೪ ಮೊಳ ಅಗಲಕ್ಕೆ ಇಳಿಯುವವರೆಗೆ ಈ ಉಜ್ಜುವಿಕೆ ನಿರಂತರವಾಗಿ ಸಾಗುತ್ತದೆ. ಸಡಿಲವಾಗಿ ನೇಯ್ದ ಈ ಕಂಬಳಿ ಎಳೆಗಳು ಉಜ್ಜುವಿಕೆಯಿಂದಾಗಿ ಒತ್ತೊತ್ತಾಗಿ ನೇಯ್ಗೆಯ ಗುರುತೂ ಉಳಿಯದಂತೆ ಕೂಡಿಕೊಳ್ಳುತ್ತವೆ. ಹೀಗೆ ಉಜ್ಜಿ ಚಿಕ್ಕದಾದ ಉಜ್ಜುಗಂಬಳಿಯನ್ನು ಕೆರೆಗೋ ಹೊಳೆಗೋ ಒಯ್ದು ಗಂಜಿ ಹೋಗುವಂತೆ ಜಾಲಾಡಿಸಿ ತೊಳೆದು 'ಅಕ್ಕೆ'ಗೆ ಹಾಕುವರು. ಹಸಿಯಾಗಿರುವಾಗ ಕಂಬಳಿ ಹೇಗೆ ಎಳೆದಂತೆ ಹಾಗೆ ಓಲಾಡುವುದಾದ್ದರಿಂದ ಉದ್ದ -ಅಗಲಗಳನ್ನು ಅಳೆದು ಸರಿಪಡಿಸಲಾಗುತ್ತದೆ. ನಂತರ ಕಂಬಳಿಯನ್ನು ನೆಲದ ಮೇಲೆ ಹಾಕಿ ಚಾಪೆಯನ್ನೊ, ಒಣದಾದ ಬೇರೆ ಕಂಬಳಿಯನ್ನೋ ಅದರ ಮೇಲೆ ಹಾಸಿ ಒಂದು ದಿನ ಬಿಟ್ಟು ಮೂರನೇ ದಿನ ಮತ್ತೆ ಬಿಸಿಲಲ್ಲಿ ಚೆನ್ನಾಗಿ ಒಣಗಿಸಿ ಮಡಿಚಿಟ್ಟರೆ ಉಜ್ಜುಗಂಬಳಿ ಸಿದ್ಧಗೊಂಡಂತೆ.

ಉಜ್ಜುಗಂಬಳಿಗಳು ಯಾವುದೇ ಕೃತಕ ಬಣ್ಣಗಳಿಲ್ಲದೇ ಪ್ರಕೃತಿದತ್ತವಾದ ಕಪ್ಪು, ಬಿಳಿ, ಮಾಸಲು ಕಂದು ಬಣ್ಣಗಳಲ್ಲಿ ಮಾತ್ರ ದೊರೆಯುತ್ತವೆ. ಕಾರಣ ಉಜ್ಜುಗಂಬಳಿಯನ್ನು ಕುದಿಯುವ ನೀರಿನಲ್ಲಿ ನೆನೆಸಿ ಉಜ್ಜುವುದರಿಂದ ಕೃತಕ ಬಣ್ಣ ನಿಲ್ಲುವುದಿಲ್ಲವಾದ್ದರಿಂದ ಕೃತಕ ಬಣ್ಣವನ್ನು ಕೂಡಿಸುವುದಿಲ್ಲ. ಈಚಿನವರೆಗೆ ಬರೀ ಪ್ರಕೃತಿದತ್ತ ಉಣ್ಣೆಯ ಬಣ್ಣಗಳಲ್ಲಿ ಮಾತ್ರ ದೊರೆಯುತ್ತಿದ್ದ ಉಜ್ಜು ಕಂಬಳಿಗಳು ಇತ್ತಿತ್ತಲಾಗಿ ಹೊಸ ಹೊಸ ತಂತ್ರಜ್ಞಾನ ಹಾಗೂ ಕೊಳ್ಳುವವರ ಬೇಡಿಕೆಗನುಗುಣವಾಗಿ ಹೊಸ ನಮೂನೆಯಲ್ಲಿ ಮಾರುಕಟ್ಟೆಗೆ ಬರುತ್ತಿವೆ.

### ಗದ್ದುಗೆ ಧಾವಳಿ

ಗದ್ದುಗೆಯೆಂದರೆ ಕೂರುವ ಸ್ಥಳ. ಧಾವಳಿ ಎನ್ನುವುದು ಧವಳ ಪದದಿಂದ ಬಂದುದಾಗಿದ್ದು ಧವಳ ಎಂದರೆ ಬಿಳಿ ಎಂದರ್ಥ. ಹಾಗಾಗಿ ಕೂಡಲು ಬಳಸುವ ಅಚ್ಚಬಿಳಿಯ ಕಂಬಳಿಯೇ ಗದ್ದುಗೆ ಧಾವಳಿ. ಧಾರ್ಮಿಕ ಗುರುಗಳ ಗದ್ದುಗೆಗೆ ಅಲ್ಲದೇ ಪವಿತ್ರ ಕಾರ್ಯಗಳಲ್ಲಿಯೂ ಇದರ ಉಪಯೋಗವಾಗುತ್ತದೆ. ಈ ಕಂಬಳಿಯನ್ನು ವಿಶೇಷವಾಗಿ ವೈದಿಕರು ಬಳಸುತ್ತಾರೆ. ಇದನ್ನು ಹೆಚ್ಚಾಗಿ ಗದ್ದುಗೆಯ ಬಳಕೆಗಾಗಿಯೇ ಉಪಯೋಗಿಸುತ್ತಾರಾದರೂ ಅಲ್ಲಲ್ಲಿ ಶಾಲಿನಂತೆ ಹೊದೆಯಲೂ ಬಳಸುವುದುಂಟು. ಅಲ್ಲದೇ ಇದೇ ಉಣ್ಣೆಯಿಂದ ಪೂಜಾ ಸಾಮಗ್ರಿಗಳನ್ನಿಡುವ ಚೀಲಗಳನ್ನೂ ತಯಾರಿಸುವರು. ದಾವಣಗೆರೆ ಸುತ್ತಲಿನ ಪ್ರದೇಶದಲ್ಲಿ ಧಾರ್ಮಿಕ ಗುರುಗಳು ಮನೆಗಳಿಗೆ ಬಂದರೆ, ವಿಶೇಷವಾದ ಪೂಜೆಗಳಲ್ಲಿ ಈಗಲೂ ಈ ಬಿಳಿಯ ಗದ್ದುಗೆಗಂಬಳಿಗಳನ್ನು ಬಳಸುವುದು ರೂಢಿಯಲ್ಲಿದೆ.[೬]

### ಕರಿಯ ಕಂತೆ

ಕುರುಬರ ಕುಲಗುರುಗಳಾದ ಒಡೆಯರುಗಳು ತಮ್ಮ ಗುರುವಾದ ರೇವಣಸಿದ್ಧರಿಗೆ ತಾವೇ ನೇಯ್ದು ಅರ್ಪಿಸುವ ಕಂತೆಯೂ ಕಂಬಳಿಯ ಒಂದು ವಿಧ. ಈ ಕಂತೆಯ ಕುರಿತಾಗಿ ಸವಿಸ್ತಾರವಾದ ವಿವರಣೆಯನ್ನು ಮೂರನೇ ಅಧ್ಯಾಯವಾದ ಕಂಬಳಿಯ ಆಚರಣೆ-ಸಂಪ್ರದಾಯಗಳು ಎಂಬಲ್ಲಿ ಕೊಟ್ಟಿದೆ.

ಸಾಮಾನ್ಯವಾಗಿ ಕರ್ನಾಟಕದಲ್ಲಿ ಇಷ್ಟು ವಿಧಗಳಲ್ಲಿ ಕಂಬಳಿಗಳ ವೈವಿಧ್ಯತೆಯನ್ನು ಕಾಣಬಹುದಾಗಿದೆ. ಈ ಎಲ್ಲದರ ತಯಾರಿಕಾ ಹಂತಗಳು ಹೆಚ್ಚೂ ಕಡಿಮೆ ಒಂದೇ ಆದರೂ ಗುಣಮಟ್ಟ ಮತ್ತು ಬಳಕೆಯ ಹಿನ್ನೆಲೆಯಲ್ಲಿ ಇವುಗಳಲ್ಲಿ ವಿಶೇಷತೆಯನ್ನು ಕಾಣುತ್ತೇವೆ.

ಕಂಬಳಿಯ ವೈವಿಧ್ಯತೆಗಳ ಮೊದಲು ಜಾಗತಿಕ ಮಟ್ಟದಲ್ಲಿ ಕಂಬಳಿ ಉತ್ಪಾದನೆಯ ಪ್ರಾಚೀನತೆಯನ್ನು ಕುರಿತು ಅವಲೋಕಿಸುವುದು ಯೋಗ್ಯವೆನಿಸುತ್ತದೆ. ಬ್ಯಾಬಿಲೋನಿಯಾದಲ್ಲಿ ಉಣ್ಣೆಯ ಜಮಖಾನೆಗಳ ಉತ್ಪಾದನೆ ಕ್ರಿ.ಪೂ. ೫೦೦೦ ವರ್ಷಗಳಷ್ಟು ಹಿಂದೆಯೇ ನಡೆಯುತ್ತಿತ್ತು. ದೇವಾಲಯಗಳಲ್ಲಿನ ಬಳಕೆಗಾಗಿ ಕಲೆಗಾರಿಕೆಯಿಂದ ಕೂಡಿದ ಉಣ್ಣೆಯ ಕಂಬಳಿಗಳನ್ನು ಈಜಿಪ್ತಿನಲ್ಲಿ ಉತ್ಪಾದಿಸಲಾಗುತ್ತಿತ್ತು. ಪರ್ಷಿಯಾ ದೇಶವೂ ಕೂಡ ಕಂಬಳಿ ಮತ್ತು ಉಣ್ಣೆ ಜಮಖಾನೆಗಳ ನೆಯ್ಗೆಗೆ ತುಂಬ ಪ್ರಸಿದ್ಧವಾಗಿದೆ. ಪರ್ಷಿಯನ್ನರು ಬ್ಯಾಬಿಲೋನಿಯಾವನ್ನು ಗೆದ್ದ ಮೇಲೆ ಬ್ಯಾಬಿಲೋನಿಯಾದಲ್ಲಿ ಪ್ರಸಿದ್ಧವಾಗಿದ್ದ ಉಣ್ಣೆ ಉತ್ಪಾದನೆಗಳ ತಯಾರಿಕೆಗೆ ಕ್ರಿ.ಪೂ. ೫೩೮ರ ಸುಮಾರಿಗೆ ಪರ್ಷಿಯಾದಲ್ಲಿಯೂ ಚಾಲನೆ ದೊರಕಿತು. ಆ ಕಾಲದಲ್ಲಿ ಪರ್ಷಿಯಾದಲ್ಲಿ ದೊರೆಯುವ ಉತ್ಕೃಷ್ಟ ಮಟ್ಟದ ನೇಯ್ಗೆ ಹಾಗೂ ಕಲಾತ್ಮಕ ರತ್ನಗಂಬಳಿಗಳನ್ನು ಅತ್ಯಂತ ಐಶ್ವರ್ಯಯುತ ವಸ್ತುಗಳೆಂದು ಪರಿಗಣಿಸ ಲಾಗುತ್ತಿತ್ತೆಂದು ತಿಳಿದು ಬರುತ್ತದೆ. ಪೂರ್ವದ ದೇಶಗಳೊಂದಿಗೆ ಯುದ್ಧ ಮಾಡಿ ಹಿಂತಿರುಗುವಾಗ ಅಲೆಕ್ಸಾಂಡರನ ಸೈನಿಕರು ಅಲ್ಲಿನ ರತ್ನಗಂಬಳಿಗಳನ್ನು ತಮ್ಮೊಂದಿಗೆ ತೆಗೆದುಕೊಂಡು ಹೋದರೆಂದು ಚರಿತ್ರೆ ತಿಳಿಸುತ್ತದೆ.[೭] ಕ್ರಿ.ಶ. ೨ನೆಯ ಶತಮಾನಕ್ಕೆ ಸೇರಿದ ಪ್ರಾಚೀನ ಹಾಸು

ಈಗಲೂ ದೊರೆಯುತ್ತಿದ್ದು ಅದಕ್ಕೆ ಜುಂಗಿನ ಮೇಲ್ಮೈ ಇದ್ದುದಾಗಿ ತಿಳಿದುಬರುತ್ತದೆ. ಇಷ್ಟು ಜಾಗತಿಕ ಮಟ್ಟದ ಉಣ್ಣೆ ಉತ್ಪಾದನೆಯ ಪ್ರಾಚೀನತೆಯನ್ನಿಟ್ಟುಕೊಂಡು ಅದು ಭಾರತಕ್ಕೆ ಕಾಲಿಟ್ಟ ಬಗೆಯನ್ನು ಮತ್ತು ಉದ್ಯಮದ ಪ್ರಾರಂಭದಲ್ಲಿ ಭಾರತದಲ್ಲಿ ಪ್ರಸಿದ್ಧಿಯನ್ನು ಪಡೆದ ರತ್ನಗಂಬಳಿ, ಜಮಖಾನೆ, ಶಾಲು ಮುಂತಾದವುಗಳ ಪ್ರಾಚೀನತೆಯನ್ನು ಈ ಮುಂದಿನಂತೆ ನೋಡಲಾಗಿದೆ.

**ರತ್ನಗಂಬಳಿ**

ರತ್ನಗಂಬಳಿ ಉದ್ಯಮವು ಭಾರತಕ್ಕೆ ಸುಮಾರು ೧೬-೧೭ನೆಯ ಶತಮಾನದ ಹೊತ್ತಿಗೆ ಪರ್ಷಿಯಾದಿಂದ ಬಂದಿತೆಂಬುದು ಐರೋಪ್ಯ ವಿದ್ವಾಂಸರ ಅಭಿಮತ. ಆದರೆ ಮೊಗಲರು ಮೂಲತಃ ಪರ್ಷಿಯನ್ನರಾದ್ದರಿಂದ ಅವರು ಕಂಬಳಿಗಳಿಗೆ ಹೆಸರುವಾಸಿಯಾದ ಪರ್ಷಿಯಾದಿಂದ ರತ್ನಗಂಬಳಿಗಳನ್ನು ತರಿಸಿಕೊಳ್ಳುತ್ತಿದ್ದಿರ ಬಹುದೆಂದು ಊಹಿಸಬಹುದಾಗಿದೆ. ಹಾಗೆಂದ ಮಾತ್ರಕ್ಕೆ ಈ ಹಿಂದೆ ಭಾರತದಲ್ಲಿ ಕಂಬಳಿ ಉದ್ಯಮ ಇರಲೇ ಇಲ್ಲ ಎನ್ನಲಾಗದು. ಮೊಘಲ ಚಕ್ರವರ್ತಿಗಳಾದ ಅಕ್ಬರ್, ಶಹಜಹಾನ್ ಮುಂತಾದವರು ಕಂಬಳಿ ಉದ್ಯಮಕ್ಕೆ ತುಂಬ ಪ್ರೋತ್ಸಾಹ ಕೊಟ್ಟವರು. ಮೊಘಲರ ಕಾಲದಲ್ಲಿ ನಯವಾದ ಉಣ್ಣೆಗೆ ಹೆಸರು ವಾಸಿಯಾದ ಕಾಶ್ಮೀರದಿಂದ ಉಣ್ಣೆಯನ್ನು ತರಿಸಿಕೊಂಡು ಕಂಬಳಿ ತಯಾರಿಸಲಾಗುತ್ತಿತ್ತೆಂಬ ಅಂಶ ಬೆಳಕಿಗೆ ಬರುತ್ತದೆ. ಒಂದೇ ಅಂಗುಲದಲ್ಲಿ ೮೦೦ರಿಂದ ೧೨೦೦ ಹೆಣಿಗೆಗಳಿರುವಂತೆ ಅತ್ಯಂತ ಕುಶಲ ಕಲೆಗಾರಿಕೆಯಿಂದ ಕೂಡಿದ ಅಂದವಾದ ಕಂಬಳಿಗಳನ್ನು ತಯಾರಿಸುತ್ತಿದ್ದ ಕೀರ್ತಿ ಭಾರತಕ್ಕೆ ಸಲ್ಲುತ್ತದೆ. ಈ ರತ್ನಗಂಬಳಿಗಳಲ್ಲಿ ಉಣ್ಣೆಯೊಂದಿಗೆ ರೇಷ್ಮೆ, ಚಿನ್ನ, ಬೆಳ್ಳಿಯ ಎಳೆಗಳನ್ನು ಸೇರಿಸಿ ನೇಯಲಾಗುತ್ತಿತ್ತು. ಇಂಥ ಬೆಲೆಬಾಳುವ ರತ್ನಗಂಬಳಿಗಳು ರಾಜರ ಅರಮನೆಗಳಲ್ಲಿ ಬಳಕೆಯಾಗುತ್ತಿದ್ದವಲ್ಲದೇ ಚಕ್ರವರ್ತಿ, ಮಹಾರಾಜರುಗಳಂಥ ಉನ್ನತ ವ್ಯಕ್ತಿಗಳಿಗೆ ಶ್ರೇಷ್ಠ ಗುಣಮಟ್ಟ ಹಾಗೂ ಅತ್ಯಂತ ನಯವಾದ ಕಲೆಗಾರಿಕೆಯಿಂದ ಕೂಡಿದ ರತ್ನಗಂಬಳಿಗಳನ್ನು ಕಾಣಿಕೆಯಾಗಿ ನೀಡುವ ಸತ್ಸಂಪ್ರದಾಯವೂ ಭಾರತದಲ್ಲಿತ್ತೆಂಬ ಅಂಶವನ್ನು ಇತಿಹಾಸ ಸಾರಿ ಹೇಳುತ್ತದೆ.

**ಉಣ್ಣೆ ಜಮಖಾನೆ**

ಉಣ್ಣೆಯ ಉತ್ಪನ್ನಗಳಲ್ಲಿ ಉಣ್ಣೆಯಿಂದ ತಯಾರಾಗುವ ವಿಶಿಷ್ಟವಾದ ಕುಶಲತೆಯಿಂದ ಕೂಡಿದ ಜಮಖಾನೆಗಳು ಸೇರಿವೆ. ಉಣ್ಣೆ ಜಮಖಾನೆಗಳಲ್ಲಿ ಎರಡು ಬಗೆಗಳಿವೆ. ೧. ನಯವಾದ ಮೇಲ್ಮೈಯುಳ್ಳ ಜಮಖಾನಗಳು ಮತ್ತೊಂದು ಪೈಲ್ (ಕಾಲಿನ್) ಜಮಖಾನೆಗಳು. ಈ ಉಣ್ಣೆಯ ಜಮಖಾನೆಗಳ ತಯಾರಿಕೆಗೆ ಕಾಶ್ಮೀರ ಅತ್ಯಂತ ಪ್ರಸಿದ್ಧ. ಇರಾನಿನಿಂದ ಬಂದ ಕಾಶ್ಮೀರಿ ಪರಿಣಿತ ಕೆಲಸಗಾರರು ಕಾಶ್ಮೀರ ಕಣಿವೆಯ ಶಹೀರಖಾನೆ(ಅರಸರ ಕಾರ್ಯಾಗಾರ)ಗಳಲ್ಲಿ ತರಬೇತಿ ನೀಡುತ್ತಿದ್ದ ಬಗ್ಗೆ ಐನ-ಎ-ಅಕ್ಬರಿಯಲ್ಲಿ ಉಲ್ಲೇಖವಿದೆ.[೮] ಅಲ್ಲಿಂದ ಉಣ್ಣೆ ಜಮಖಾನೆಗಳ ತಂತ್ರಜ್ಞಾನ ಕಾಶ್ಮೀರ ಮೂಲಕ ಆಗ್ರಾ, ದೆಹಲಿ, ಲಾಹೋರ ಹಾಗೂ ದಕ್ಷಿಣ ಭಾರತಕ್ಕೂ ಪರಿಚಯವಾಯಿತು. ಜಮಖಾನೆಯ ರೂಪದಲ್ಲಿರುವ ಈ ನೆಲಹಾಸುಗಳಲ್ಲಿನ

ಕೆಲವೊಂದು ವಿನ್ಯಾಸಗಳು ಒಂದೊಂದು ಸಂಕೇತಗಳನ್ನು ಪ್ರತಿನಿಧಿಸುತ್ತವೆ. ವೃತ್ತ ನಿರಂತರತೆಯನ್ನು ಜಿಗ್‌ಜಾಗ್ ನೀರು ಅಥವಾ ಮಿಂಚನ್ನು, ಸ್ವಸ್ತಿಕ್‌ದೀಪ ಮತ್ತು ಬೆಳಕನ್ನು, ಮರ ಔದಾರ್ಯವನ್ನು ಹೇಳುವುದೆಂಬ ಅಭಿಪ್ರಾಯವಿದೆ. ಈ ಉಣ್ಣೆ ನೆಲ ಹಾಸುಗಳಿಗೆ ಹೆಸರುವಾಸಿಯಾದ ಇನ್ನೊಂದು ಸ್ಥಳವೆಂದರೆ ಜಯಪುರ. ಇಲ್ಲಿ ತಯಾರಾಗುವ ಜಮಖಾನೆಗಳಿಗೆ ೧೬ರಿಂದ ೩೬ ಹೆಣಿಗೆಗಳಿರುತ್ತವೆ. ಉತ್ತರ ಪ್ರದೇಶದ ಶಹಜಹಾನಪುರ ದಲ್ಲಿ ಪರ್ಷಿಯನ್ ಮಾದರಿಯ ನೆಲಹಾಸುಗಳಲ್ಲದೇ ಕೆಥರೀ ವಾಲ್‌ಚೆಲ್, ಜೈನ ಮುಜ್, ತಖಧರ್ ಮತ್ತು ಔರಂಗೀಯ ನಮೂನೆಯ ಜಮಖಾನೆಗಳಿಗೂ ಈ ಸ್ಥಳ ಖ್ಯಾತಿ ಪಡೆದಿದೆ. ವಾರಂಗಲ್‌ನಲ್ಲಿ ಮೆಹಬೂಬಖಾನಿ, ತೀರಂದಾಸಖಾನಿ, ಹಸಿಂದಾಸಖಾನಿ ನಮೂನೆಯ ಜಮಖಾನೆಗಳು ಸಿದ್ಧವಾಗುತ್ತವೆ.

**ಶಾಲು, ಸಕಲಾತಿ ಹಾಗೂ ಸಣ್ಣ ಕಂಬಳಿಗಳು**

ಇವು ಅತ್ಯುತ್ತಮವಾದ ಹೊದೆಯುವ ಉಣ್ಣೆಯ ವಸ್ತ್ರಗಳು. ಉಣ್ಣೆಯ ವಸ್ತ್ರಗಳಲ್ಲಿ ನಯಗಾರಿಕೆ ಮತ್ತು ಕಲಾತ್ಮಕತೆಯಲ್ಲಿ ರತ್ನಗಂಬಳಿ ಮತ್ತು ಜಮಖಾನದ ನಂತರದ ಸ್ಥಾನವನ್ನು ಈ ಶಾಲುಗಳು ಪಡೆಯುತ್ತವೆ. ಶಾಲುಗಳಲ್ಲಿ ಕಾಶ್ಮೀರದ ಶಾಲುಗಳು ತುಂಬ ಪ್ರಸಿದ್ಧವಾದವು. ಉತ್ತಮ ದರ್ಜೆಯ ಉಣ್ಣೆಯಿಂದ ಸಣ್ಣ ನೂಲು ತೆಗೆದು ಈ ಶಾಲುಗಳನ್ನು ನೇಯಲಾಗುತ್ತದೆ. ಶಾಲುಗಳಲ್ಲಿ ತುಂಬ ಪ್ರಸಿದ್ಧವಾದವುಗಳೆಂದರೆ ಕಾಶ್ಮೀರದ ಶಾಲುಗಳು. ಈ ಪ್ರದೇಶದಲ್ಲಿ ಶ್ರೇಷ್ಠ ದರ್ಜೆಯ ಉಣ್ಣೆ ಲಭ್ಯತೆಯಿಂದಾಗಿ ಮೃದು ಮತ್ತು ಹಗುರವಾದ ಶಾಲುಗಳ ಉತ್ಪಾದನೆ ಸಾಧ್ಯವಾಗಿದೆ. ಈ ಶಾಲುಗಳ ತಯಾರಿಕೆಗೆ ಕಾಶ್ಮೀರದ ಕಣಿವೆಯಂತೆಯೇ ಹಿಮಾಚಲ ಪ್ರದೇಶದ ಮಂಡಿ, ಕುಲು, ಚಂಬಾದಂತಹ ಅನೇಕ ಪ್ರದೇಶಗಳು ಹೆಸರುವಾಸಿ ಯಾಗಿವೆ. ಶಾಲು ನೇಯುವ ಕಲೆ ಪರಂಪರಾಗತವಾಗಿ ಬರುತ್ತಿರುವುದರಿಂದ ಸಾಂಪ್ರದಾಯಿಕತೆ, ಕಲಾತ್ಮಕತೆಗಳು ಹಾಗೆಯೇ ಮುಂದುವರಿದುಕೊಂಡು ಬರುತ್ತಿವೆ. ಶಾಲುಗಳಲ್ಲಿ ನಯಗಾರಿಕೆ ಕುಶಲತೆಗನು ಗುಣವಾಗಿ ಅನೇಕ ನಮೂನೆಗಳಿದ್ದು ಅವುಗಳಲ್ಲಿ ಜಮಾವರ ನಮೂನೆ ಪ್ರಸಿದ್ಧವಾದುದು. ಕಾರಣ ಇದರ ನೇಯ್ಗೆ ತುಂಬ ಸಂಕೀರ್ಣವಾಗಿದ್ದು ನೇರ ಮತ್ತು ಅಡ್ಡಗೆರೆಗಳ ಅಥವಾ ಉದ್ದ ಪಟ್ಟಿಗಳಲ್ಲಿ ವಿಂಗಡಿಸಬಹುದಾದ ಜ್ಯಾಮಿತಿಯ ಸರಿಗೆ ನೇಯ್ಗೆ ಹೊಂದಿರುತ್ತದೆ. ಇದರಲ್ಲಿ ಚಥಮ್, ಖಂಟಾ, ಖಬಾಟೊವಿ ಎಂದು ಅನೇಕ ಬಗೆಯ ನಮೂನೆಗಳಿವೆ. ಅಲ್ಲದೇ ತ್ರಿಶೂಲ್, ಯಾಸೀನ್, ಸ್ವಸ್ತಿಕ್, ಕಬ್ರೂದಾರ್‌ಗಳಂತೆ ಇನ್ನೂ ಹಲವು ವಿನ್ಯಾಸದ ಶಾಲುಗಳನ್ನು ಹೆಸರಿಸಬಹುದು. ಹಿಮಾಲಯ ಪ್ರದೇಶದಲ್ಲಿ ಸಮುದ್ರಮಟ್ಟದಿಂದ ಸುಮಾರು ೧೪,೦೦೦ ಅಡಿ ಅಥವಾ ಅದಕ್ಕೂ ಎತ್ತರದಲ್ಲಿ ವಾಸಿಸುವ ಒಂದು ಜಾತಿಯ ಮೇಕೆಯ ಉದರಭಾಗದಿಂದ ತೆಗೆದ ಪಶ್ಮಿನಾ ಎಂದು ಕರೆಯುವ ಉಣ್ಣೆ ತುಂಬ ಪ್ರಸಿದ್ಧವಾದುದು. ಈ ತುಪ್ಪಳದಿಂದ ತಯಾರಿಸಿದ ಶಾಲುಗಳು ಭಾರೀ ಬೆಲೆಯಲ್ಲಿ ಮಾರಾಟವಾಗುವುದಕ್ಕೆ ಪ್ರಸಿದ್ಧಿಯಾಗಿದೆ. ಪಶ್ಮಿನಾ ಉಣ್ಣೆಯನ್ನು ವರ್ಗೀಕರಿಸಿದ ನಂತರ ಉಳಿಯುವ ತುಪ್ಪಳವನ್ನು 'ಶೆಲಿ' ಎನ್ನುವರು. ಇದರಿಂದ 'ಕರ್ಚ್' ಎಂದು ಹೆಸರಾದ ಜಮಖಾನೆಯನ್ನು ತಯಾರಿಸುವರು. ಇವಲ್ಲದೇ 'ಶಟ್‌ಷ' ಎಂಬುದೂ ಶ್ರೇಷ್ಠ ದರ್ಜೆಯ ಉಣ್ಣೆ. ಇದರಿಂದ ಅತ್ಯಂತ ನಯವಾದ

ಬಟ್ಟೆ ತಯಾರಿಸಬಹುದಾಗಿದ್ದು ಆ ಬಟ್ಟೆ ಹಕ್ಕಿಗರಿಯಷ್ಟು ಹಗುರ ಹಾಗೂ ಬೆಚ್ಚನೆಯ ಅನುಭವ ಕೊಡುವಂಥದ್ದಾಗಿರುತ್ತದೆ.

ಮೊದಲು ಮೇಲ್ವರ್ಜೆಯವರಿಗೆ ಮಾತ್ರ ಸೀಮಿತವಾಗಿದ್ದ ಶಾಲುಗಳು ಯಂತ್ರಯುಗದಲ್ಲಿ ಎಲ್ಲರ ಕೈಗೆಟಕುವಂತಾಗಿದ್ದು ಇನ್ನೂ ತನ್ನ ಜನಪ್ರಿಯತೆಯನ್ನು ಉಳಿಸಿಕೊಂಡಿವೆ. ಮುಂಚಿನ ಕಾಲದಲ್ಲಿ ಸಕಲಾತಿಯನ್ನು ಪ್ರತ್ಯೇಕವಾಗಿಯೇ ಗುರುತಿಸಲಾಗುತ್ತಿತ್ತು. ಆದರೆ ಇಂದು ಸಕಲಾತಿ ಶಾಲಿನಲ್ಲಿಯೇ ಐಕ್ಯಗೊಂಡಿದೆ. ಅಲ್ಲದೇ ಶಾಲಿನ ಅಳತೆಯ ಸಣ್ಣ ಕಂಬಳಿಗಳೂ ಇಂದು ದೊರೆಯುತ್ತಿವೆ. ಆದರೆ ಇವು ಒರಟಾಗಿದ್ದು ಕೊಳೆಯಾದಾಗಲೆಲ್ಲ ಇವನ್ನು ತೊಳೆದು ಸ್ವಚ್ಛಗೊಳಿಸಬಹುದಾದುದರಿಂದ ಈ ಸಣ್ಣ ಕಂಬಳಿಗಳನ್ನು 'ತೊಳಿಗಂಬಳಿ' ಎಂತಲೂ ಕರೆಯುವರು. ಈ ಶಾಲುಗಳ ತಯಾರಿಕೆ ಇಂದು ಬಹುತೇಕವಾಗಿ ಯಾಂತ್ರೀಕೃತಗೊಂಡಿದೆ. ಕರ್ನಾಟಕದ ಮಟ್ಟಿಗೆ ಕೋಲಾರ, ರಾಣೆಬೆನ್ನೂರು, ದಾವಣಗೆರೆ, ಚಿಕ್ಕನಾಯಕನ ಹಳ್ಳಿಗಳಲ್ಲಿ ಇಂದು ಉತ್ತಮ ಗುಣಮಟ್ಟದ ಶಾಲುಗಳನ್ನು ಉತ್ಪಾದಿಸಲಾಗುತ್ತಿದೆ.

ಈ ಮೇಲೆ ನೋಡಿದ ರತ್ನಗಂಬಳಿ, ಜಮಖಾನೆ, ಶಾಲುಗಳು ಅಪ್ಪಟ ಕಂಬಳಿಗಳಲ್ಲದಿದ್ದರೂ ಇವು ಕೂಡ ಉಣ್ಣೆಯ ವಸ್ತ್ರಗಳೆಂಬ ಕಾರಣಕ್ಕಾಗಿ ಇವುಗಳನ್ನು ಅಧ್ಯಯನದ ಪರಿಧಿಯಲ್ಲಿ ಒಳಗು ಮಾಡಿಕೊಳ್ಳಲಾಗಿದೆ. ಈ ಪ್ರಾಚೀನ ಉಣ್ಣೆ ವಸ್ತ್ರಗಳೊಂದಿಗೆ ಇಂದಿನ ಉಲ್ಲನ್ ಕಂಬಳಿಯನ್ನೂ ಸೇರಿಸಬಹುದಾಗಿದೆ. ಕಾರ್ಖಾನೆಗಳಲ್ಲಿ ದೊರೆಯುವ ಉಣ್ಣೆಯ ಪರಿಷ್ಕೃತ ರೂಪವಾದ ಉಲ್ಲನ್‌ದಿಂದಲೂ ಕಂಬಳಿಯನ್ನು ನೇಯುವ ಹೊಸ ಪ್ರಯೋಗವಿಂದು ರೂಢಿಯಲ್ಲಿ ಬರತೊಡಗಿದೆ. ಮಾರುಕಟ್ಟೆಯಲ್ಲಿ ದೊರೆಯುವ ಉಲ್ಲನ್ ತಂದು ಅದರಿಂದ ಎಳೆಗಳನ್ನು ತೆಗೆದು ಕಂಬಳಿ ತಯಾರಿಕೆಯ ಎಲ್ಲ ಹಂತಗಳಿಂದಲೇ ಈ ಉಲ್ಲನ್ ಕಂಬಳಿಯನ್ನು ನೇಯುವರು.[೬] ಅಲ್ಲದೆ ಈ ಪ್ರಯೋಗದಲ್ಲಿ ಕೆಲವರು ಯಶಸ್ಸನ್ನೂ ಕಂಡಿರುವರು. ಈ ಕಂಬಳಿಗಳನ್ನಿವರು ಸುಮಾರು ೧೨೦೦ರಿಂದ ೧೬೦೦ ರೂ.ಗಳಿಗೊಂದರಂತೆ ಉಲ್ಲನ್ ದರಕ್ಕನುಗುಣವಾಗಿ ಹೆಚ್ಚು ಕಡಿಮೆ ಮಾರುವರು. ಕಂಬಳಿಯಷ್ಟು ಇದು ಬಾಳಿಕೆ ಬರುವುದಿಲ್ಲವಾದರೂ ವಿಶೇಷವೆನ್ನಿಸುವ ಹಾಗೂ ವಿವಿಧ ಬಣ್ಣಗಳಲ್ಲಿನ ಲಭ್ಯತೆಯಿಂದಾಗಿ ಆಕರ್ಷಕವೆನ್ನಿಸಬಹುದಾಗಿದೆ.

### ಉಣ್ಣೆಯ ವೈವಿಧ್ಯತೆ

ಕಂಬಳಿ ಉತ್ಪಾದನೆ ಯಾವುದೇ ಒಂದು ದೇಶಕ್ಕೆ ಸೀಮಿತವಾಗಿರದೇ ವಿಶ್ವದಾದ್ಯಂತ ಉತ್ಪಾದನೆಗೊಳ್ಳುತ್ತಿರುವುದನ್ನು ನೋಡಿದಾಗ ಈ ಕಂಬಳಿಗೆ ಕಚ್ಚಾವಸ್ತುವಾದ ಉಣ್ಣೆಯ ಲಭ್ಯತೆಯೂ ಜಗತ್ತಿನಾದ್ಯಂತ ದೊರೆಯುತ್ತದೆನ್ನುವುದನ್ನು ಮನಗಾಣುತ್ತೇವೆ. ಎಲ್ಲಾ ರಾಷ್ಟ್ರಗಳಲ್ಲಿ ದೊರೆಯುವ ಉಣ್ಣೆ ಕುರಿಯ ತುಪ್ಪಳದ್ದೇ ಆದರೂ ಆಯಾ ದೇಶಗಳಲ್ಲಿ ಲಭ್ಯವಿರುವ ಕುರಿಯ ವೈವಿಧ್ಯತೆಗನುಸಾರವಾಗಿ ಉಣ್ಣೆಯ ಗುಣಮಟ್ಟ ಮತ್ತು ಬಣ್ಣಗಳಲ್ಲೂ ಅನೇಕ ಬಗೆಗಳನ್ನು ಕಾಣುತ್ತೇವೆ.

ಜಗತ್ತಿನಲ್ಲಿ ವರ್ಷಕ್ಕೆ ಸುಮಾರು ೩.೧ ಮಿಲಿಯನ್ ಮೆಟ್ರಿಕ್ ಟನ್‌ಗಳಷ್ಟು ಉಣ್ಣೆ ಉತ್ಪಾದನೆಯಾಗುತ್ತದೆ. ಆಸ್ಟ್ರೇಲಿಯಾ, ಅರ್ಜೆಂಟೈನಾ, ಸೋವಿಯತ್ ಯೂನಿಯನ್, ಚೀನಾ, ನ್ಯೂಜಿಲ್ಯಾಂಡ, ದ.ಆಫ್ರಿಕಾ, ಗ್ರೇಟ್‌ಬ್ರಿಟನ್, ಟರ್ಕಿ, ಪಾಕಿಸ್ತಾನ ಇವು ಉಣ್ಣೆ ಉತ್ಪಾದನೆಯಲ್ಲಿರುವ ಅಗ್ರರಾಷ್ಟ್ರಗಳು.[೧೦] ನ್ಯೂಜಿಲ್ಯಾಂಡ್ ಮತ್ತು ಆಸ್ಟ್ರೇಲಿಯಾಗಳು ಉಣ್ಣೆ ಉತ್ಪಾದನೆಯಲ್ಲಿ ಪ್ರಮುಖ ಸ್ಥಾನ ಪಡೆದಿವೆ. ಅನೇಕ ದೇಶಗಳಲ್ಲಿ ಉಣ್ಣೆಗಾಗಿಯೇ ಕುರಿಗಳ ಸಾಕಾಣಿಕೆ ಒಂದು ಕೈಗಾರಿಕೆಯ ರೂಪದಲ್ಲಿ ಬೆಳೆದಿದೆ. ಆಸ್ಟ್ರೇಲಿಯಾ, ಇಂಗ್ಲೆಂಡ್, ಸ್ಪೇನ್, ಅಮೇರಿಕ, ಜರ್ಮನಿ, ದ.ಆಫ್ರಿಕಾ ಮುಂತಾದ ದೇಶಗಳಲ್ಲಿ ಬೆಳೆಸುವ ಉತ್ತಮ ತಳಿಯ ಕುರಿಗಳಿಂದ ಮೃದು ಹಾಗೂ ನಯವಾದ ಉಣ್ಣೆ ಲಭ್ಯವಾಗುತ್ತದೆ. ಮೆರಿನೋ ಜಾತಿಯ ಹಾಗೂ ಮೆರಿನೋ ಮಿಶ್ರ ತಳಿಯ ಕುರಿಗಳು ಉತ್ತಮ ಗುಣಮಟ್ಟದ ಉಣ್ಣೆಗೆ ಹೆಸರುವಾಸಿಯಾಗಿವೆ. ಜರ್ಮನಿ, ಸಾಕ್ಸೋನಿ ಜಾತಿಯ ಫ್ರಾನ್ಸ್ ರ್‍ಯಾಮ್ ಬುಲೆಟ್ ಜಾತಿಯ ಕುರಿಗಳ ಉಣ್ಣೆ ಪ್ರಖ್ಯಾತವಾಗಿದೆ. ಇದು ಜಾಗತಿಕ ಮಟ್ಟದ ಉಣ್ಣೆಯ ವೈವಿಧ್ಯತೆಯಾದರೆ ಕರ್ನಾಟಕದಲ್ಲಿ ಅದರಲ್ಲೂ ಬಾಗಲಕೋಟೆ, ಬಿಜಾಪೂರ ಜಿಲ್ಲೆಯ ಉಣ್ಣೆಯನ್ನು ಗಮನಿಸುವುದಾದರೆ ಇಲ್ಲಿ ಡೆಕ್ಕಲ್, ಕೊರಡಲ್ ಹಾಗೂ ಕೆಂಬುಲೆ ಜಾತಿಯ ಕುರಿಗಳಿವೆ.[೧೧] ಈ ಜಾತಿಯ ಕುರಿಗಳ ಉಣ್ಣೆಯು ಶ್ರೇಷ್ಟ ದರ್ಜೆಗೆ ಹೆಸರುವಾಗಿಯಾಗಿದೆ.

ಇದಿಷ್ಟು ಲಭ್ಯವಾದ ವಿವಿಧ ಬಗೆಯ ಉತ್ತಮ ಮಟ್ಟದ ಉಣ್ಣೆಯ ಕುರಿತಾದ ಮಾಹಿತಿಯಾಗಿದೆ. ಇವಿಷ್ಟೇ ಅಲ್ಲದೇ ವಿಶ್ವದ ತುಂಬ ಇನ್ನೂ ಅನೇಕ ದೇಶಗಳಲ್ಲಿ ಅನೇಕ ತೆರನಾದ ಉತ್ತಮ ಗುಣಮಟ್ಟದ ಉಣ್ಣೆ ದೊರೆಯುತ್ತದೆಂಬ ಮಾಹಿತಿ ದೊರೆಯುತ್ತದೆ.

## ಉಣ್ಣೆ ಕೈಗಾರಿಕೆ ಯಾಂತ್ರೀಕರಣಗೊಂಡ ಬಗೆ

ಕುಲಕಸುಬಿನ ರೂಪದಲ್ಲಿದ್ದ ಉಣ್ಣೆ ನೇಕಾರಿಕೆಯು ಕ್ರಿ.ಶ.೫೦೦ರ ವೇಳೆಗೆ ಕೈಗಾರಿಕಾ ರೂಪ ಪಡೆದುದಾಗಿ ತಿಳಿದು ಬರುತ್ತದೆ. ಇದೇ ಕಾಲಕ್ಕೆ ರೋಮನ್ನರಿಂದ ಮೊಟ್ಟಮೊದಲ ಉಣ್ಣೆ ಕಾರ್ಖಾನೆ ಇಂಗ್ಲೆಂಡಿನ ವಿಂಚಿಸ್ಟರ್‌ನಲ್ಲಿ ಸ್ಥಾಪನೆಯಾಯಿತು. ಈ ಉಣ್ಣೆ ಕೈಗಾರಿಕೆ ಇಂಗ್ಲೆಂಡಿನ ಅರ್ಥವ್ಯವಸ್ಥೆಯಲ್ಲಿ ಬಹುಬೇಗ ಪ್ರಾಮುಖ್ಯತೆ ವಹಿಸತೊಡಗಿತು. ಆದರೆ ಇಂಗ್ಲೆಂಡ್ ಅಮೇರಿಕಾದಲ್ಲಿ ಉಣ್ಣೆ ಕೈಗಾರಿಕೆ ಬೆಳೆಯದಂತೆ ಸಾಕಷ್ಟು ಅಡೆತಡೆಗಳನ್ನುಂಟು ಮಾಡಿತು. ಕಾರಣ ವಸಾಹತುಶಾಹಿ ದೇಶಗಳವರು ತನ್ನ ದೇಶದ ಸರಕನ್ನೇ ಅವಲಂಬಿಸಬೇಕೆಂಬುದು ಇಂಗ್ಲೆಂಡಿನ ಸ್ಪಷ್ಟ ನಿಲುವಾಗಿತ್ತು. ಇಷ್ಟೆಲ್ಲ ಅಡ್ಡಿಗಳ ಮಧ್ಯದಲ್ಲೂ ಕ್ರಿ.ಶ.ಸು. ೧೭೦೦ರ ಹೊತ್ತಿಗಾಗಲೇ ಅಮೇರಿಕಾದಲ್ಲಿ ಉಣ್ಣೆಯ ನೂಲು ತೆಗೆಯುವ ಹಾಗೂ ನೇಯುವ ಕೈಗಾರಿಕೆಗಳು ಸಮೃದ್ಧವಾಗಿ ಬೆಳೆದವು. ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಫ್ರಾನ್ಸಿನ ಮೆರೆ ಜಾಕ್ವರ್ಡ ಎಂಬಾತನೇ ಯಂತ್ರ ಮಗ್ಗವನ್ನು ಕಂಡು ಹಿಡಿದ ಮೊದಲಿಗ. ಅವನ ಸಂಶೋಧನಾ ಫಲವಾದ ಈ ಯಂತ್ರ ಮಗ್ಗದಿಂದ ಆತಂಕಗೊಂಡ ಕೈಮಗ್ಗ ನೇಕಾರರು ಫ್ರೆಂಚಿನ ಲಿಯೊನ್ಸ್ ನಗರದಲ್ಲಿ ಕಲ್ಲಿನಿಂದ ಹೊಡೆದು ಆ ಸಂಶೋಧಕನನ್ನು ಊರಿಂದ ಹೊರಗಟ್ಟಿದರು. ಇಷ್ಟೇ ಅಲ್ಲದೇ ೧೮೩೯ರಲ್ಲಿ ಜೇಮ್ಸ್ ಟೆಂಪಲಸನ್ ಎಂಬುವವನು ಹೆಚ್ಚು ತುಪ್ಪಳ ಉಳಿಸುವಂಥ ಡಬಲ್ ವೀವಿಂಗ್ ಪ್ರೊಸೆಸನ್ನು ಕಂಡುಹಿಡಿದನು.

ಹೀಗೆ ಯಾಂತ್ರಿಕ ಸ್ವರೂಪ ಪಡೆದುಕೊಂಡ ಮಗ್ಗಗಳು ಕ್ರಮೇಣ ವಿದ್ಯುತ್ ಚಾಲಿತ ಮಗ್ಗಗಳಾಗಿ ಪರಿವರ್ತನೆಗೊಂಡವು. ೧೮೫೯ರಲ್ಲಿ ಎರಾಸ್ಟಸ್ ಬ್ರಿಗ್‌ಹ್ಯಾಮ್ ಬಿಗೆಲೋನನ ಸಂಶೋಧನೆಯಿಂದಾಗಿ ವಿದ್ಯುತ್ ಮಗ್ಗಗಳು ಪ್ರಾರಂಭವಾದವು. ಹಬೆಯಂತ್ರದಿಂದ ನಡೆಸಲಾದ ಮೊದಲ ಮಗ್ಗ ಲೋವೆಲ್ ಮ್ಯಾನಿಫ್ಯಾಕ್ಚರಿಂಗ್ ಕಂಪನಿಯಲ್ಲಿ ಸ್ಥಾಪನೆಯಾಯಿತು. ಇದಕ್ಕಿಂತ ಮೊದಲು ಒಬ್ಬ ದೊಡ್ಡಾಳು ಹಾಗೂ ಒಂದು ಚಿಕ್ಕ ಹುಡುಗ ಸೇರಿ ದಿನವೊಂದಕ್ಕೆ ೧೦ರಿಂದ ೧೨ ಗಂಟೆಗಳ ಕಾಲ ಶ್ರಮಪಟ್ಟು ದುಡಿದಾಗ ೭ ಗಜ ಬ್ರಸೆಲ್ಸ್ ಮಾದರಿಯ ಜಮಖಾನೆಯನ್ನು ನೇಯುವುದು ಸಾಧ್ಯವಾಗುತ್ತಿತ್ತು. ಆದರೆ ಬಿಗೆಲೋನನ ಮಗ್ಗದ ಪರಿಚಯವಾದ ಮೇಲೆ ದಿನವೊಂದಕ್ಕೆ ಅತ್ಯುತ್ತಮ ಮಟ್ಟದ ಸುಮಾರು ೨೫ ಗಜದ ಉಣ್ಣೆ ಜಮಖಾನೆಯನ್ನು ನೇಯಲು ಸಾಧ್ಯವಾಯಿತು. ಹಾಗಾಗಿ ಬರೀ ಕೆಲವೇ ರಾಜರ, ಶ್ರೀಮಂತರ ಸೊತ್ತಾಗಿದ್ದ ನೆಲಹಾಸುಗಳಾದ ಉಣ್ಣೆಯ ರಗ್ಗು, ಜಮಖಾನೆ, ರತ್ನಗಂಬಳಿಗಳು ಜನಸಾಮಾನ್ಯರಿಗೆ ಎಟುಕುವ ದರದಲ್ಲಿ ಲಭ್ಯವಾಗುವಂತಾಯಿತು. ಇದೇ ಕಾರಣಕ್ಕೆ ಕ್ರಿ.ಶ.೧೮೫೯ನ್ನು ಕೈಗಾರಿಕಾ ಪ್ರಪಂಚದಲ್ಲಿ ಕ್ರಾಂತಿಯನ್ನೆಬ್ಬಿಸಿದ ಯುಗ ಪ್ರವರ್ತಕ ವರ್ಷವನ್ನಾಗಿ ಪರಿಗಣಿಸಲಾಗುತ್ತದೆ.

ಕಂಬಳಿ ಉದ್ಯಮದ ಸುಧಾರಣೆಯಲ್ಲಿ ಕ್ರಾಂತಿಕಾರಕ ಬದಲಾವಣೆ ತಂದವುಗಳಲ್ಲಿ ೧೮೭೬ರಲ್ಲಿ ಪರಿಚಯಿಸಿದ ಹಾಲ್ಸಿಯನ್ ಕಿನ್ನರ್‌ನ ಸುಧಾರಿತ ಯಂತ್ರಮಗ್ಗವೂ ಒಂದು. ಕಿನ್ನರನ ಈ ಸುಧಾರಿತ ಮಗ್ಗಗಳ ಪರಿಚಯದ ಪೂರ್ವದಲ್ಲಿ ದಿನವೊಂದಕ್ಕೆ ಇಬ್ಬರು ದೊಡ್ಡವರು ಮತ್ತು ಒಬ್ಬ ಚಿಕ್ಕ ಹುಡುಗ ಸೇರಿ ದುಡಿದಾಗ ಸುಮಾರು ೧.೫ ಗಜದಷ್ಟು ನೇಯುತ್ತಿದ್ದು ಇವನ ಸಂಶೋಧನೆಯ ನಂತರದಲ್ಲಿ ದಿನಕ್ಕೆ ೪೦ರಿಂದ ೬೦ ಗಜದಷ್ಟು ನೇಯಲು ಸಾಧ್ಯವಾಯಿತು. ಸಾಮಾನ್ಯವಾಗಿ ಮೊದಲಿನ ವಿದ್ಯುತ್ ಮಗ್ಗಗಳು ೨೭ ಅಂಗುಲದ ಜಮಖಾನೆಗಳನ್ನು ಮಾತ್ರ ತಯಾರಿಸುತ್ತಿದ್ದು, ನೆಲದ ತುಂಬ ಹಾಸಲು ದೊಡ್ಡ ನೆಲಹಾಸುಗಳು ಬೇಕಾದರೆ ನೆಲದ ಉದ್ದಗಲಕ್ಕೆ ತಕ್ಕಂತೆ ತುಂಡುಗಳನ್ನು ಸೇರಿಸಿ ಹೊಲಿಯಬೇಕಾಗುತ್ತಿತ್ತು. ಈ ಕೊರತೆಯನ್ನು ನೀಗಿಸುವಂಥ ವಿಶಾಲವಾದ ಮಗ್ಗಗಳು ತದನಂತರದಲ್ಲಿಯೇ ಜಾರಿಗೆ ಬಂದವು. ಈ ವಿಶಾಲವಾದ ಮಗ್ಗಗಳಲ್ಲಿ ಒಮ್ಮೆಲೇ ೯ರಿಂದ ೧೮ ಅಡಿ ಅಗಲದ ವಿಶಾಲ ಜಮಖಾನೆಯನ್ನು ತಯಾರಿಸುವಂಥ ಮಗ್ಗಗಳು ಜಾರಿಗೆ ಬಂದದ್ದೂ ಉತ್ಪಾದನಾ ರೀತಿಯಲ್ಲಿನ ಮಹತ್ಸಾಧನೆಯೇ ಸರಿ. ವಿಶಾಲ ಮಗ್ಗಗಳೆಂದು ಖ್ಯಾತಿ ಪಡೆದ ಈ ಮಗ್ಗಗಳು ಬಣ್ಣ, ನಮೂನೆ, ರೀತಿಗಳಲ್ಲಿ ಯಾವುದೇ ಬದಲಾವಣೆಗಳಿಲ್ಲದ ಸಾಮಾನ್ಯ ಮತ್ತು ಚಿತ್ರವತ್ತಾದ ೪.೫ ಅಡಿ ಅಥವಾ ಅದಕ್ಕಿಂತ ಅಗಲವಾದ ಜಮಖಾನೆಗಳನ್ನು ನೇಯುವ ಸಾಮರ್ಥ್ಯ ಪಡೆದವು.

ಜಗತ್ತಿನ ಬೇರೆ ಬೇರೆ ರಾಷ್ಟ್ರಗಳ ಕಂಬಳಿ ಉದ್ಯಮವನ್ನು ಭಾರತದೊಂದಿಗೆ ಹೋಲಿಸಿದರೆ ಆ ಮಟ್ಟಿನ ಸಂಪೂರ್ಣ ಯಾಂತ್ರೀಕರಣ ಸಾಧ್ಯವಾಗಿರದಿದ್ದರೂ ಭಾಗಶಃವಾಗಿ ಕಾಲಿಟ್ಟಿದೆ. ಭಾರತೀಯರ ಕಂಬಳಿ ಬಳಕೆಯ ಪರಂಪರಾಗತ ರೂಢಿ ಅವರನ್ನಿನ್ನೂ ಕೈಮಗ್ಗದ ಉತ್ಪನ್ನಗಳಿಂದ ವಿಮುಖರನ್ನಾಗಿಸಿಲ್ಲ. ಹಾಗಾಗಿಯೇ ಇಷ್ಟೊಂದು ಯಾಂತ್ರಿಕತೆಯ ಭರಾಟೆಯ ಮಧ್ಯದಲ್ಲೂ ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಕೈಮಗ್ಗಗಳು ಚಾಲ್ತಿಯಲ್ಲಿರುವುದು ಆಶ್ಚರ್ಯದ ಸಂಗತಿಯೇನಲ್ಲ.

## ಕಂಬಳಿ ಮಾರಾಟ ವ್ಯವಸ್ಥೆ

ಕಂಬಳಿ ಉತ್ಪಾದನೆಯ ನಂತರದಲ್ಲಿ ಬೆಲೆ ನಿಗದಿಪಡಿಸುವರು. ಈ ಬೆಲೆ ನಿಗದಿಗೆ ಒಂದು ರೀತಿಯನ್ನು ಅನುಸರಿಸುತ್ತಾರೆ. ಅದೆಂದರೆ ಉಣ್ಣೆ ಕಿಮ್ಮತ್ತು+ನೂಲಿನ ಮಜೂರಿ+ನೇಯ್ಗೆ ಮಜೂರಿ+ಲಾಭ ಇಷ್ಟನ್ನು ದೃಷ್ಟಿಯಲ್ಲಿಟ್ಟುಕೊಂಡು ಕಂಬಳಿಯೊಂದರ ದರ ನಿಗದಿಪಡಿಸಲಾಗುತ್ತದೆ. ಕಾಲಕ್ಕೆ ತಕ್ಕಂತೆ ಉಣ್ಣೆಯ ಬೆಲೆ ಮತ್ತು ಮಜೂರಿಯ ದರಗಳು ಹೆಚ್ಚು ಕಡಿಮೆಯಾದಂತೆ ಕಂಬಳಿಯ ಬೆಲೆಯಲ್ಲಿಯೂ ಏರುಪೇರಾಗುತ್ತದೆ. ಹೀಗೆ ಬೆಲೆ ನಿಗದಿಯ ನಂತರದ ಹಂತವೆಂದರೆ ಅದಕ್ಕೆ ಮಾರುಕಟ್ಟೆ ಒದಗಿಸುವುದು.

ಕಂಬಳಿಯ ಉತ್ಪಾದನಾ ಕಲೆ ಜನಾಂಗವೊಂದರ ಸ್ವತ್ತಾಗಿದ್ದು ಅದರ ಅವಶ್ಯಕತೆ ಎಲ್ಲ ಸಮಾಜ ದವರಿಗೂ ಇದ್ದುದರಿಂದ ಬೇರೆ ಸಮಾಜದವರೆಲ್ಲ ಅವರಿಂದಲೇ ಕಂಬಳಿಯನ್ನು ಪಡೆಯಬೇಕಾಗುತ್ತದೆ. ಮೊದಲು ವಸ್ತುವಿನ ಕೊಡುಕೊಳ್ಳುವಿಕೆ ರೂಪದಲ್ಲಿ ನಡೆಯುತ್ತಿದ್ದ ಈ ಮಾರಾಟ ವ್ಯವಸ್ಥೆಯಲ್ಲಿ ಲಾಭದ ದೃಷ್ಟಿಯಿರಲಿಲ್ಲ. ಕಾಲ ಬದಲಾದಂತೆ ಕಂಬಳಿಗೆ ಬೆಲೆ ನಿರ್ದಿಷ್ಟಪಡಿಸಿ ವಸ್ತುವಿನಿಮಯ ಮಾಡಿಕೊಳ್ಳುವು ದಕ್ಕಿಂತ ಅದನ್ನು ಮಾರುವುದರಲ್ಲಿಯೇ ಲಾಭಗಳಿಸಬಹುದೆಂಬ ವ್ಯವಹಾರ ತಿಳುವಳಿಕೆ ಕಂಬಳಿಯ ಮಾರಾಟಕ್ಕೆ ಪ್ರೇರೇಪಿಸಿತು. ಅಂತೆಯೇ ನಂತರದಲ್ಲಿ ಕಂಬಳಿಯ ಮಾರಾಟ ರೂಢಿಯಾಯಿತು. ಕಂಬಳಿಯ ಮಾರಾಟದ ವಿಧಾನಕ್ಕನುಗುಣವಾಗಿ ಎರಡು ರೂಪದಲ್ಲಿ ಮಾರಾಟ ವ್ಯವಸ್ಥೆಯನ್ನು ನೋಡಬಹುದಾಗಿದೆ:

೧. ವೈಯಕ್ತಿಕ ೨. ಸಾಂಘಿಕ

### ೧. ವೈಯಕ್ತಿಕ

ಈ ಮಾರಾಟ ವ್ಯವಸ್ಥೆಯಲ್ಲಿ ಕಂಬಳಿಯನ್ನು ಸಿದ್ಧಪಡಿಸಿದ ವ್ಯಕ್ತಿಯೇ ಅದರ ಮಾರಾಟವನ್ನು ಮಾಡುವನು. ಕಂಬಳಿಯನ್ನು ಇಂತಿಷ್ಟು ಬೆಲೆಗೆ ನೇಯ್ದು ಕೊಡುವುದಾಗಿ ಗುತ್ತಿಗೆ ಹಿಡಿದಿರುತ್ತಾನೆ. ಹೀಗೆ ಕಂಬಳಿ ಬೇಕೆಂದವರು ತಾವೇ ಅವನಲ್ಲಿಗೆ ಬಂದು ಒಯ್ಯುವುದೂ ಒಂದು ವಿಧ. ಇನ್ನೊಂದು ವಿಧವೆಂದರೆ ಸಾಕಷ್ಟು ನೇಯ್ದಿಟ್ಟ ಕಂಬಳಿಗಳನ್ನು ತಾನೇ ಒಯ್ದು ತಮ್ಮದೇ ಊರಲ್ಲೋ ಅಥವಾ ಬೇರೆ ಊರಲ್ಲೋ ನಡೆಯುವ ಸಂತೆ, ಜಾತ್ರೆಗಳಲ್ಲಿ ತಾನು ನಿಗದಿಪಡಿಸಿದ ಬೆಲೆಗೆ ಮಾರಾಟ ಮಾಡುವುದು. ಇವೆರಡೂ ವಿಧಗಳಲ್ಲಿ ಮಾರಾಟದ ಸಂಪೂರ್ಣ ಜವಾಬ್ದಾರಿ ಒಬ್ಬನೇ ವ್ಯಕ್ತಿಯ ಮೇಲಿರುತ್ತದೆ. ವೈಯಕ್ತಿಕ ಮಾರಾಟ ವ್ಯವಸ್ಥೆಯಲ್ಲಿ ಕೊಡುಕೊಳ್ಳುವವರ ಮಧ್ಯೆ ಮೂರನೆಯವರ ಹಸ್ತಕ್ಷೇಪವಿಲ್ಲದೇ ಬರುವ ಲಾಭಾಂಶವೆಲ್ಲ ಕಂಬಳಿಯ ನೇಕಾರನಿಗೇ ಸಲ್ಲುತ್ತದೆ.

ವೈಯಕ್ತಿಕ ಮಾರಾಟ ವ್ಯವಸ್ಥೆಯಲ್ಲಿ ಇನ್ನೊಂದು ತೆರನಾದ ವ್ಯವಸ್ಥೆಯೂ ಇದೆ. ಕಂಬಳಿ ಉತ್ಪಾದನೆ ಮಾಡಿದ ನೇಕಾರ ತಾನೇ ಮಾರಾಟ ಮಾಡುವ ಬದಲು ಒಬ್ಬ ದಲ್ಲಾಳಿಯನ್ನು ಗುರುತಿಸಿಕೊಂಡು ಅವನ ಮೂಲಕ ಮಾರಾಟವನ್ನು ಮಾಡುವುದು. ಈ ವ್ಯವಸ್ಥೆಯಲ್ಲಿ ಬರುವ ಲಾಭ ಉತ್ಪಾದಕ ಮತ್ತು ದಲ್ಲಾಳಿ ಇಬ್ಬರಿಗೂ ಅವರು ಮೊದಲೇ ನಿರ್ಧರಿಸಿಕೊಂಡ ಅನುಪಾತದಲ್ಲಿ ಹಂಚಿಕೆಯಾಗುತ್ತದೆ. ಹೀಗೆ ದಲ್ಲಾಳಿಯನ್ನು

ಮಧ್ಯದಲ್ಲಿರಿಸಿಕೊಂಡು ಕಂಬಳಿ ಮಾರಾಟ ಮಾಡುವ ಪ್ರಕ್ರಿಯೆ ಸ್ವಾತಂತ್ರ್ಯ ಪೂರ್ವಕಾಲದಿಂದಲೂ ಇದ್ದುದಾಗಿ ತಿಳಿದುಬರುತ್ತದೆ. ಉದಾ. ಬಾಗಲಕೋಟೆ ಜಿಲ್ಲೆಯ ಬೂದಿಹಾಳ(S.H)ದಿಂದ ಆಗಿನ ಪೇಠಾ ಆಗಿದ್ದ ಕಲಾದಗಿಗೆ ಕಂಬಳಿಗಳನ್ನೊಯ್ದು ಅಲ್ಲಿಯ ದಲ್ಲಾಳಿಗಳ ಸಹಾಯದಿಂದ ಈಗ ೧೫೦೦ರೂ. ಬೆಲೆಬಾಳುವ ಕಂಬಳಿಯನ್ನು ಆಗ ೩ ರೂಪಾಯಿಗೆ ಮಾರಿ ಬಂದ ಹಣದಲ್ಲಿ ದಲ್ಲಾಳಿಗೂ ಸ್ವಲ್ಪ ಕೊಟ್ಟಿದುದಾಗಿ ಹೇಳುವರು.[೧೨] ಲಾಭದ ದೃಷ್ಟಿಯಿಂದ ನೋಡಿದಾಗ ವೈಯಕ್ತಿಕ ರೂಪದ ಮಾರಾಟ ವ್ಯವಸ್ಥೆಯಲ್ಲಿ ಲಾಭಾಂಶದ ಬಹುಪಾಲು ಉತ್ಪಾದಕನಿಗೇ ದೊರೆಯುವುದು. ಹಾಗಾಗಿ ಇದನ್ನು ಉತ್ಪಾದಕನಿಗೇ ಹಿತವನ್ನು ಉಂಟು ಮಾಡಬಲ್ಲ ವ್ಯವಸ್ಥೆಯೆಂದು ಪರಿಗಣಿಸಬಹುದಾಗಿದೆ.

**೨. ಸಾಂಘಿಕ**

ಒಂದೇ ವೃತ್ತಿಯ ಅನೇಕ ಜನ ಸೇರಿ ಒಂದು ಸಂಸ್ಥೆಯನ್ನು ಮಾಡಿಕೊಂಡು ತನ್ಮೂಲಕ ತಮ್ಮ ಉತ್ಪಾದನೆಗಳ ಕುರಿತಾದ ವ್ಯಾಪಾರ-ವಹಿವಾಟನ್ನು ನಡೆಸುವರು. ಇದೇ ರೀತಿಯಲ್ಲಿ ಕಂಬಳಿ, ಉಣ್ಣೆಯ ಉತ್ಪಾದನೆಗಳ ವ್ಯಾಪಾರವನ್ನು ಕೇಂದ್ರವಾಗಿಟ್ಟುಕೊಂಡು ಸಾಂಘಿಕ ರೂಪದಲ್ಲಿ ವ್ಯವಹಾರ ಮಾಡುವ ರೂಢಿಯಿದೆ. ತಾನು ಉತ್ಪಾದಿಸಿದ ಉತ್ಪನ್ನಗಳಿಗೆ ಯಾವಾಗಲೂ ಮಾರುಕಟ್ಟೆ ಒದಗುವುದು ಕಷ್ಟ. ಹಾಗಾಗಿ ತಮ್ಮದೇ ಆದ ಈ ಸಂಘಕ್ಕೆ ಯಾವಾಗ ಬೇಕಾದರೂ ಕಂಬಳಿಗಳನ್ನು ಮಾರಬಹುದು. ಹೀಗೆ ಮಾರಿದಾಗ ಆ ಸಂಘವು ಉತ್ಪನ್ನಗಳಿಗನುಗುಣವಾಗಿ ಬೆಲೆ ನಿಗದಿಪಡಿಸಿದಂತೆ ಕೊಂಡುಕೊಳ್ಳುವುದು. ಇದರಿಂದ ತಾನು ಹೂಡಿದ ಬಂಡವಾಳಕ್ಕೆ ನಿರ್ದಿಷ್ಟ ಬೆಲೆ ದೊರೆತರೆ ಮತ್ತೆ ಬಂಡವಾಳ ಹೂಡಲು ಅನುವಾಗುತ್ತದೆ. ಅಲ್ಲದೇ ಉಣ್ಣೆ ಉತ್ಪನ್ನಗಳು ಬಹುಬೇಗ ಹಾಳಾಗುವಂಥವಾದ್ದರಿಂದ ಉತ್ಪಾದಕ ಅವುಗಳ ಸಂರಕ್ಷಣೆಯಿಂದ ಆದಷ್ಟು ಬೇಗ ಮುಕ್ತನಾಗಬಯಸುವನು. ಉಣ್ಣೆ ವಸ್ತುಗಳ ಸಾಂಘಿಕ ರೂಪದ ಮಾರಾಟ ವ್ಯವಸ್ಥೆ ಹುಟ್ಟಿಕೊಳ್ಳುವುದಕ್ಕೆ ಇದೂ ಒಂದು ಕಾರಣವಾಗಿದೆ. ಸಂಘದಲ್ಲಿ ಹೀಗೆ ಕ್ರೋಢೀಕರಣಗೊಂಡ ಕಂಬಳಿಗಳನ್ನು ಅಲ್ಲಿಯೇ ಇಟ್ಟುಕೊಂಡು ಮಾರಾಟ ಮಾಡುವುದು ಮತ್ತು ಪರ ಊರುಗಳಲ್ಲಿ ನಡೆಯುವ ಸಂತೆ, ಜಾತ್ರೆ, ಉತ್ಸವಗಳಲ್ಲಿ ಮಾರಾಟ ಮಾಡುವುದು ಎರಡೂ ರೂಢಿಗಳಿವೆ. ತದನಂತರದಲ್ಲಿ ಬಂದ ಲಾಭಾಂಶವು ಸಂಘಕ್ಕೆ ಲಾಭವಾಗುತ್ತದೆ.

ಸಾಂಘಿಕ ರೂಪದ ಕಂಬಳಿ ವ್ಯಾಪಾರದ ಉಲ್ಲೇಖವನ್ನು ಶಾಸನಗಳಲ್ಲೂ ಕಾಣುತ್ತೇವೆ. ಸ್ವಹಿತರಕ್ಷಣೆ, ವೃತ್ತಿ ಸೌಕರ್ಯ, ಸಾಮಾಜಿಕ ಸ್ಥಾನಮಾನಗಳಿಗಾಗಿ ಉತ್ಪಾದಕ, ವಿನಿಮಯವೃತ್ತಿಯವರು ರಚಿಸಿಕೊಂಡ ಸಂಘಟನೆಯೇ ಉತ್ಪಾದಕ ವಿನಿಮಯ ಸಂಘ.[೧೩] ಇಂಥ ಸಂಘಗಳಲ್ಲಿ 'ಕುರುಬಸೇಣಿ'ಯೂ ಒಂದಾಗಿದ್ದ ಬಗ್ಗೆ ಮಾಹಿತಿ ದೊರೆಯುತ್ತದೆ. ೧೧೬೧ರ ಒಂದು ಶಾಸನದಲ್ಲಿ ಬರುವಂತೆ 'ಕುರುಬಸೇಣಿಗರೊಕ್ಕಲು ವೀಸ ಒಯ್ದಂ ಕೊಟ್ಟರ್' ಎಂಬ ಉಲ್ಲೇಖ ದೊರೆಯುತ್ತದೆ. ಹೆಸರೇ ಹೇಳುವಂತೆ 'ಕುರುಬಸೇಣಿಯು' ಕುರುಬರಿಗೆ ಸಂಬಂಧಿಸಿದ್ದಾಗಿದ್ದು, ಕುರಿ ಉಣ್ಣೆಯಿಂದ ಕಂಬಳಿ ತಯಾರಿಸುವ ಕುರುಬರ ಕುಲ ಕಸುಬಿನ ಉತ್ಪಾದನೆ ಮತ್ತು ವಿತರಣೆ ಎರಡೂ ಹಂತಗಳಲ್ಲಿ ಈ ಸಂಘ ಕುರುಬರಿಗೆ ಸಹಕಾರ ಕೊಡುತ್ತಿದ್ದುದಾಗಿ ತೋರುತ್ತದೆ.

ವೃತ್ತಿ ಸೌಲಭ್ಯ, ಸ್ವಹಿತರಕ್ಷಣೆ, ಸಾಮಾಜಿಕ ಸ್ಥಾನಮಾನಗಳಂಥ ಆಶಯಗಳನ್ನಿಟ್ಟುಕೊಂಡು ಸಮಾನಮನಸ್ಕರು ಸೇರಿ ಹುಟ್ಟು ಹಾಕಿದ ಸಹಕಾರಿ ಸಂಘಗಳನ್ನು ಗ್ರಾಮ, ತಾಲೂಕು, ಜಿಲ್ಲಾ, ರಾಜ್ಯಾದ್ಯಂತ ವಿವಿಧ ಮಟ್ಟಗಳಲ್ಲಿ ಕಾಣುತ್ತೇವೆ. ಸರ್ ಎಂ.ವಿಶ್ವೇಶ್ವರಯ್ಯನವರು ಹಳೇ ಮೈಸೂರು ರಾಜ್ಯದ ಕೈಗಾರಿಕೆಗಳ ಅಭಿವೃದ್ಧಿ ಯೋಜನೆಗಳನ್ನು ತಯಾರಿಸಿಕೊಟ್ಟುದುದರ ಫಲವಾಗಿ ರಾಜ್ಯಸರ್ಕಾರ ಉಣ್ಣೆ, ಹತ್ತಿ, ರೇಶ್ಮೆಗಳ ಅಭಿವೃದ್ಧಿಗಾಗಿ ಸಹಕಾರ ಸಂಘಗಳನ್ನು ಪ್ರಾರಂಭಿಸಲು ಅನುಮತಿಸಿತು. ಈ ಅನುಮತಿಗನುಗುಣವಾಗಿ ೧೯೫೬ರಲ್ಲಿ 'ಕರ್ನಾಟಕರಾಜ್ಯ ಉಣ್ಣೆ ಕೈಮಗ್ಗ ನೇಕಾರರ ಸಹಕಾರಿ ಸಂಘ ನಿಯಮಿತ' ಅಧಿಕೃತವಾಗಿ ನೋಂದಣಿಗೊಂಡು ಅಸ್ತಿತ್ವಕ್ಕೆ ಬಂದಿತು. ಈ ಸಂಘದ ಕುರಿತಾಗಿ ಶಿವಾನಂದ ಗುಬ್ಬಣ್ಣವರ ಮಾಹಿತಿ ಒದಗಿಸುತ್ತಾರೆ.[೧೪] ಉಣ್ಣೆ ನೇಕಾರರಿಗೆ ಕಚ್ಚಾ ಮಾಲನ್ನು ಒದಗಿಸಿ ಅವರು ಸಿದ್ಧಪಡಿಸಿದ ಕಂಬಳಿಗಳನ್ನು ರಾಜ್ಯ ಹಾಗೂ ದೇಶದ ವಿವಿಧ ಭಾಗಗಳಲ್ಲಿ ಮಾರಾಟ ಮಾಡುವುದು ಇವೇ ಮುಂತಾದ ಗುರಿಹೊಂದಿದ ಈ ಸಂಘವು ಸರಕಾರ ಹಾಗೂ ಖಾದಿ ಗ್ರಾಮೋದ್ಯೋಗ ಆಯೋಗದ ೨೧.೪೪ ಲಕ್ಷ ರೂಪಾಯಿಗಳ ಶೇರು ಬಂಡವಾಳದೊಂದಿಗೆ ಪ್ರಾರಂಭವಾಯಿತು. ಕಂಬಳಿ ಸ್ಥಿತಿಗನುಗುಣವಾಗಿ ಸೋಡಿ, ರಕಮು ನೀಡುವುದಲ್ಲದೇ ಕಂಬಳಿಗಳ ದಾಸ್ತಾನಿಗಾಗಿ ಬಡ್ಡಿರಹಿತ ಮೂರು ಲಕ್ಷ ರೂಪಾಯಿಗಳ ಸಾಲ ನೀಡುವ ಮೂಲಕ ೧೫೦ ಸದಸ್ಯ ಸಂಘಗಳ ಅವಶ್ಯಕತೆಗನುಗುಣವಾಗಿ ಈ ಸಂಘ ಕಾರ್ಯ ನಿರ್ವಹಿಸುತ್ತದೆ. ೬ ಲಕ್ಷ ರೂಪಾಯಿಗಳಷ್ಟು ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಿಂದ ಸಾಲತೆಗೆದುಕೊಂಡು ಕಾಫಿ, ಚಹಾ ತೋಟಗಳು ಹಾಗೂ ಸಹಕಾರಿ ಸಂಘಗಳಿಗೆ ಸುಮಾರು ೫೦%ರಷ್ಟು ಕಂಬಳಿಗಳನ್ನು ಪೂರೈಸುತ್ತದೆ. ಉಳಿದ ಕಂಬಳಿಗಳನ್ನು ಮಡಿಕೇರಿ, ಚಿಕ್ಕಮಗಳೂರು, ಸಾಗರ, ಶಿರಸಿ, ಬೆಳಗಾವಿ, ಚಳ್ಳಕೆರೆ ಹಾಗೂ ಪಾಂಡವಪುರಗಳಲ್ಲಿನ ಮಾರಾಟ ಮಳಿಗೆಗಳ ಮೂಲಕ ಮಾರಾಟ ಮಾಡುತ್ತದೆ. ಈ ಸಂಸ್ಥೆಯಡಿಯಲ್ಲಿ ಇಂದು ರಾಜ್ಯಾದ್ಯಂತ ಅನೇಕ ಸಹಕಾರಿ ಸಂಘಗಳು ಕಾರ್ಯ ನಿರ್ವಹಿಸುತ್ತಿವೆ.

ಮೇಲೆ ಹೇಳಿದ ಸಹಕಾರಿ ಸಂಘದಂಥ ಅನೇಕ ಸಹಕಾರಿ ಸಂಘಗಳು ಸ್ವಾತಂತ್ರ್ಯ ಪೂರ್ವಕಾಲದಿಂದ ಇಂದಿಗೂ ಮುನ್ನಡೆದುಕೊಂಡು ಬಂದಿವೆ. ಇಂತಹವುಗಳಲ್ಲಿ ಅಧ್ಯಯನದ ನಿಖರತೆಗಾಗಿ ಆಯ್ದುಕೊಂಡ ಸಹಕಾರಿ ಸಂಘವೆಂದರೆ ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲೂಕಿನ ಬೂದಿಹಾಳ(S.H)ದ ಕುರುಬರ ಉಣ್ಣೆ ಉತ್ಪಾದಕರ ಸಹಕಾರಿ ಸಂಘ.

**ಕುರುಬರ ಉಣ್ಣೆ ಉತ್ಪಾದಕರ ಸಹಕಾರಿ ಸಂಘ, ಬೂದಿಹಾಳ (S.H)**

ಅಧಿಕೃತವಾಗಿ ಉಣ್ಣೆ ಸಹಕಾರಿ ಸಂಘಗಳಿಗೆ ಅನುಮತಿ ದೊರೆಯುವ ಪೂರ್ವದಲ್ಲಿಯೇ ಬೂದಿಹಾಳದಲ್ಲಿ ೧೯೪೭ ಮೇ ೧೯ರಂದು ಉಣ್ಣೆ ಉತ್ಪಾದಕರ ಸಹಕಾರಿ ಸಂಘವೊಂದು ಸ್ಥಾಪಿತವಾಗಿದೆ. ಈ ಸಂಸ್ಥೆಯು ಕಂಬಳಿಯ ಉತ್ಪಾದನೆ ಮತ್ತು ಮಾರಾಟದಂತಹ ಎರಡೂ ಕ್ಷೇತ್ರಗಳಲ್ಲಿ ಕಂಬಳಿ ನೇಕಾರರಿಗೆ ಸಹಾಯ ಹಸ್ತವಾಗಿ ಕೆಲಸ ಮಾಡುತ್ತಿದೆ.

ಬೂದಿಹಾಳದ ಈ ಸಹಕಾರಿ ಸಂಘದವರು ತಮ್ಮ ಸಂಘಕ್ಕೆ ಪ್ರಾದೇಶಿಕ ಸೀಮಿತತೆಯನ್ನು ಹಾಕಿಕೊಂಡಿರುವರು. ಅದೆಂದರೆ ಈ ಊರಿನ ೫ ಚೌರಸ ಮೈಲಿ ದೂರದ ಹಳ್ಳಿಗಳಲ್ಲಿರುವ ಕಂಬಳಿ ಉದ್ಯೋಗ ಮಾಡುವವರು ಹಾಗೂ ಅವರು ತಯಾರಿಸುವ ಕಂಬಳಿಗಳೆರಡರ ವ್ಯವಹಾರ ಇದೇ ಸಹಕಾರಿ ಸಂಘಕ್ಕೆ ಸೇರುತ್ತದೆ. ಈ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಲ್ಲಿನ ಕಂಬಳಿ ನೇಕಾರರು ತಮ್ಮ ಉತ್ಪನ್ನಗಳನ್ನು ಬೇರೆ ಸಂಘಗಳಿಗೆ ಮಾರುವಂತಿಲ್ಲ. ಈ ಸಂಘಕ್ಕೆ ಕಂಬಳಿ ಒದಗಿಸುವ ನೇಕಾರರೆಲ್ಲ ಈ ಸಹಕಾರಿ ಸಂಘಕ್ಕೆ ಸದಸ್ಯರಾಗಿರಲೇ ಬೇಕಾಗುತ್ತದೆ.

ಈ ಸಂಘದ ವಹಿವಾಟನ್ನೆಲ್ಲ ನೋಡಿಕೊಳ್ಳಲು ಒಂದು ಕಾರ್ಯಕಾರೀ ಸಮಿತಿಯಿದೆ. ಅಧ್ಯಕ್ಷರು, ಕಾರ್ಯದರ್ಶಿ, ೯ ಜನ ಸದಸ್ಯರು ಮತ್ತು ಒಬ್ಬ ಜವಾನನನ್ನೊಳಗೊಂಡಿರುತ್ತದೆ. ಇಲ್ಲಿನ ಅಧ್ಯಕ್ಷ ಸ್ಥಾನಕ್ಕೆ ಪ್ರತಿ ಐದು ವರ್ಷಕ್ಕೊಮ್ಮೆ ಆಯ್ಕೆ ನಡೆಸಲಾಗುತ್ತದೆ. ಕಾರ್ಯದರ್ಶಿಯನ್ನು ಅಥವಾ ಅಧ್ಯಕ್ಷರನ್ನು ಕೆಲವೊಮ್ಮೆ ಬದಲಾಯಿಸದೇ ಅವರನ್ನೇ ಮುಂದುವರಿಸಬಹುದಾಗಿದೆ.

ಈ ಸಹಕಾರಿ ಸಂಘದ ಮೂಲಕ ನೇಕಾರರಿಗೆ ಉಣ್ಣೆಕೊಟ್ಟು, ನೇಯ್ಗೆ ಕೂಲಿಯನ್ನು ಕೊಟ್ಟು ಕಂಬಳಿಯನ್ನು ನೇಯಿಸುವುದೂ ಉಂಟು. ಅದಕ್ಕೆ ಬೇಕಾಗುವ ಉಣ್ಣೆಯ ಸಂಗ್ರಹಣೆಯನ್ನು ಸಂಘ ಸ್ಥಳೀಯವಾಗಿ ಮತ್ತು ಆಸ್ಟ್ರೇಲಿಯಾದಿಂದ ಕಚ್ಚಾರೂಪದಲ್ಲಿ ಬಂದು ಲುಧಿಯಾನಾ ಮತ್ತು ಚಂಡೀಗಢ ಉಣ್ಣೆ ಕಾರ್ಖಾನೆಗಳಲ್ಲಿ ಶುದ್ಧಗೊಂಡದ್ದನ್ನು ಖರೀದಿಸಿಯೂ ಸಂಗ್ರಹಿಸುವುದಿದೆ. ಸಂಘದಲ್ಲಿರುವ ಸಂಗ್ರಹಿತ ಕಂಬಳಿಗಳನ್ನು ಗ್ರಾಹಕರು ಅಲ್ಲಿಯೇ ಬಂದು ಖರೀದಿಸುವುದು ಹಾಗೂ ಸಂಘದವರೇ ಪರ ಊರಿನ ಜಾತ್ರೆ, ಉತ್ಸವಗಳಲ್ಲಿ ಮಾರಾಟ ಮಾಡುವುದು ಎರಡೂ ರೂಢಿಯಲ್ಲಿದೆ. ಅಲ್ಲದೇ ಬೆಳಗಾವಿ, ವಿಜಾಪುರ, ಧಾರವಾಡ, ಹಾವೇರಿಗಳಲ್ಲದೇ ನೆರೆಯ ರಾಜ್ಯವಾದ ಮಹಾರಾಷ್ಟ್ರದ ಪಟ್ಟಣಕಡೋಲಿ, ಪಂಢರಪುರಗಳಿಗೆ ಅಲ್ಲಿನ ಜನರ ಬೇಡಿಕೆಗನುಸಾರವಾಗಿ ಸಂಸ್ಥೆಯು ಕಂಬಳಿಗಳನ್ನು ಪೂರೈಸುತ್ತದೆ. ಈ ಸಂಘದ ಕಂಬಳಿಗಳಿಗೆ ಅಂತಾರಾಷ್ಟ್ರೀಯ ಮಟ್ಟದಲ್ಲೂ ಬೇಡಿಕೆಯಿದೆಯೆಂದು ಕಾರ್ಯದರ್ಶಿ ಕರಿಯಪ್ಪ ಹಾದಿಮನಿ ಹೇಳುತ್ತಾರೆ. ಈ ಸಂಘವು ವರ್ಷಕ್ಕೆ ೧೮ರಿಂದ ೨೦ ಲಕ್ಷ ರೂಪಾಯಿಯಷ್ಟು ಕಂಬಳಿಯ ವ್ಯಾಪಾರ ಮಾಡುವುದಲ್ಲದೇ ಎಲ್ಲಾ ಖರ್ಚನ್ನೂ ಕಳೆದು ಪ್ರತಿವರ್ಷ ಲಕ್ಷಾಂತರ ರೂಪಾಯಿ ಲಾಭವನ್ನು ಗಳಿಸುತ್ತಿದೆಯೆಂದೂ ಹೇಳುತ್ತಾರೆ.

ಬೂದಿಹಾಳದ ಉಣ್ಣೆ ಸಹಕಾರೀ ಸಂಘದಲ್ಲಿ ವರ್ಷದ ಬಹುತೇಕ ದಿನಗಳಲ್ಲಿ ಕಡಿಮೆಯೆಂದರೂ ಆರೇಳು ತೆರನಾದ ಕಂಬಳಿಗಳು ಮಾರಾಟಕ್ಕೆ ಲಭ್ಯವಿರುತ್ತವೆ. ಅವುಗಳ ಹೆಸರು ಮತ್ತು ದರಗಳು ಈ ಮುಂದಿನಂತಿವೆ.

೧. ಕಡ್ಡಿಕಂಬಳಿ - ೭೯೯/-

೨. ಡಿಸೈನ್ ಕಂಬಳಿ - ೯೩೧/-

೩. ಬಿಳಿ (ಜವಾರಿ ಕುರಿ) ಕಂಬಳಿ - ೯೭೮/-

೪. ಕರಿಕಂಬಳಿ - ೯೭೮/-

೫. ಮಿಕ್ಸ ಡಿಸೈನ್ - ೭೬೯/-

೬. ಮಿಕ್ಸ್ ಕಂಬಳಿ - ೬೨೮/-

೭. ಆಸ್ಟ್ರೇಲಿಯಾ ಉಣ್ಣೆಯ ಬಿಳಿ ಕಂಬಳಿ - ೨೫೦೦ದಿಂದ ೩೦೦೦/-

೮. ಮೆರಿನೊ ಊಲ ಟಾಪ್ ಕರಿ ಕಂಬಳಿ - ೧೬೦೦/-

ಇಷ್ಟು ವೈವಿಧ್ಯದ ಕಂಬಳಿಗಳು ಕೊಳ್ಳುವವರ ಬೇಡಿಕೆಗನುಗುಣವಾದ ಗುಣಮಟ್ಟ, ಬಣ್ಣ, ಆಕಾರಗಳಲ್ಲಿ ದೊರೆಯುತ್ತವೆ. ಈ ಸಂಘವು ಕಂಬಳಿ ಕೊಳ್ಳುವವರಿಗೆ ಕಂಬಳಿ ದರದ ೧೦% ರಿಯಾಯಿತಿಯನ್ನು ಕೊಡುತ್ತದೆ. ಅಲ್ಲದೇ ಒಂದು ವರ್ಷಕ್ಕೆ ಸರಕಾರ ಹೇಳಿದ ೧೦೮ ದಿನಗಳಲ್ಲಿ ಕಂಬಳಿ ದರದ ಮೇಲೆ ೨೦% ರಿಯಾಯಿತಿಯನ್ನು ಕೊಡುತ್ತದೆ. ಸರಕಾರ ನಿಗದಿಪಡಿಸಿದ ೧೦೮ ದಿನಗಳ ಕಾಲ ಗ್ರಾಹಕರಿಗೆ ಕೊಟ್ಟ ರಿಯಾಯಿತಿ ಬೆಲೆಯನ್ನು ಖಾದಿ ಆಯೋಗ ಮತ್ತು ಖಾದಿ ಬೋರ್ಡಗಳು ಈ ಸಹಕಾರಿ ಸಂಘಕ್ಕೆ ಭರಿಸುತ್ತವೆ. ಈ ಸಂಘಕ್ಕೆ ಕೇಂದ್ರ ಸರಕಾರದ ಖಾದಿ ಆಯೋಗವು ೨೦% ರಿಯಾಯಿತಿಯನ್ನು, ರಾಜ್ಯಸರಕಾರದ ಖಾದಿ ಬೋರ್ಡ್ ೧೫% ರಿಯಾಯಿತಿಯನ್ನು ಕೊಡುತ್ತವೆ. ಜೊತೆಗೆ ಜವಳಿ ಇಲಾಖೆಯು ಕಂಬಳಿ ನೇಕಾರರ ಮಕ್ಕಳಿಗೆ ಶಿಷ್ಯವೇತನವನ್ನು ಕೊಡುವುದರ ಜೊತೆಗೆ ಆಶ್ರಯ ಯೋಜನೆಯಡಿಯಲ್ಲಿ ನೇಕಾರರಿಗೆ ಆಶ್ರಯ ಮನೆಗಳ ಸೌಲಭ್ಯ ಕಲ್ಪಿಸಿಕೊಡುವುದು. ಇಷ್ಟೇ ಅಲ್ಲದೇ ಸರಕಾರದ ಧನ ಸಹಾಯದಿಂದಾಗಿ ಈ ಸಹಕಾರಿ ಸಂಘಗಳಿಗೆ ಯಾಂತ್ರೀಕೃತ ಮಗ್ಗಗಳು ಬಂದಿವೆಯಾದರೂ ಅಲ್ಲಿನ ನೇಕಾರರು ಅವುಗಳಿಗೆ ಒಗ್ಗಿಕೊಳ್ಳದ ಕಾರಣ ಇಂದು ಅವು ಚಾಲನೆಯಲ್ಲಿಲ್ಲ. ಇದೇ ತೆರನಾಗಿ ಬಾಗಲಕೋಟ ಜಿಲ್ಲೆ ಬೀಳಗಿ ತಾಲೂಕಿನ ಕುಂದರಗಿಯ ಉಣ್ಣೆ ಉತ್ಪಾದಕರ ಸಹಕಾರಿ ಸಂಘವೂ ಲಾಭದ ಗತಿಯಲ್ಲಿ ಸಾಗುತ್ತಿರುವು ದನ್ನು ಗಮನಿಸಿದಾಗ ಯಾಂತ್ರೀಕರಣದ ಭರಾಟೆಯಲ್ಲಿಯೂ ಕೈಮಗ್ಗದ ಉತ್ಪನ್ನಗಳ ಮೇಲಿನ ಜನರ ಪ್ರೀತಿ ಕಡಿಮೆಯಾಗದಿರುವುದು ಆಶಾದಾಯಕ ಸಂಗತಿಯಾಗಿದೆ. ಹೀಗೆ ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಮೊದಲಿನಿಂದಲೂ ಅಸ್ತಿತ್ವದಲ್ಲಿರುವ ಕೈಮಗ್ಗಗಳಲ್ಲದೇ ಈಗ ಯಾಂತ್ರೀಕೃತ ಮಗ್ಗಗಳೂ ಬಳಕೆಯಲ್ಲಿ ಬರುತ್ತಿವೆ.

ಈ ಉದ್ಯೋಗವನ್ನವಲಂಬಿಸಿದವರಿಗೆ ನಷ್ಟವಿಲ್ಲವಾದರೂ ಇಂದು ಆಧುನಿಕ ವಸ್ತ್ರವಿನ್ಯಾಸ ಭರಾಟೆಯಲ್ಲಿ ಇವುಗಳ ಸಾಂಪ್ರದಾಯಿಕತೆಯನ್ನು ಮಂಕುಗೊಳಿಸಿವೆ. ಜೊತೆಗೆ ಕಂಬಳಿ ವ್ಯವಸಾಯ ಕುಂಠಿತವಾಗುವುದಕ್ಕೆ ಉತ್ತರ ಕರ್ನಾಟಕದಲ್ಲಿ ಕೊಡುವ ಮುಖ್ಯ ಕಾರಣವೆಂದರೆ ಇತ್ತೀಚಿಗೆ ಉಣ್ಣೆ ಉತ್ಪಾದನೆಯೇ ಕಡಿಮೆಯಾಗುತ್ತಿದೆ. ಏಕೆಂದರೆ ಬಹಳಷ್ಟು ಜನ ಕುರಿಗಾರರು ಇಂದು ಅಧಿಕ ಮಾಂಸ ಕೊಡುವ 'ಎಳೆಗುರಿ'ಗಳನ್ನು ಸಾಕುತ್ತಿದ್ದಾರೆ. ಈ ತಳಿಯ ಕುರಿಯ ಉಣ್ಣೆ ಅಷ್ಟಾಗಿ ಬೆಳೆಯುವುದಿಲ್ಲ. ಹಾಗಾಗಿ ಉಣ್ಣೆ ಕೊರತೆಯೂ ಕಂಬಳಿ ಉತ್ಪಾದನೆಯ ಮೇಲೆ ಪ್ರತಿಕೂಲ ಪರಿಣಾಮ ಬೀರಿದೆ. ಆದರೆ

ಇಷ್ಟು ಆಧುನಿಕತೆಯ ಮಧ್ಯದಲ್ಲೂ ಕಂಬಳಿಯ ಬೇಡಿಕೆಯೇನೂ ಕಡಿಮೆಯಾಗಿಲ್ಲ. ಚಿತ್ರದುರ್ಗ ಜಿಲ್ಲೆ ಚಳ್ಳಕೆರೆಯಲ್ಲಿ ಪ್ರತಿವಾರ ಸಂತೆಯ ದಿನ ತಾಸೆರಡು ತಾಸಿನಲ್ಲಿ ಲಕ್ಷಾಂತರ ರೂಪಾಯಿಗಳ ವರೆಗೆ ಕಂಬಳಿಯ ವಹಿವಾಟು ನಡೆಯುತ್ತದೆ. ಆದರೂ ಕಂಬಳಿ ಉದ್ಯೋಗದಲ್ಲಿನ ಆಕರ್ಷಣೆ ಇಂದು ಕಡಿಮೆಯಾಗಿ ಬಹಳಷ್ಟು ಕಂಬಳಿ ನೇಕಾರರು ಬೇರೆ ಬೇರೆ ಹೊಸ ಉದ್ಯೋಗಗಳನ್ನು ಅರಸಿಕೊಂಡು ಹೋಗುತ್ತಿರುವರು. ಉದಾಹರಣೆಗೆ ಮೂಲತಃ ಕಂಬಳಿ ನೇಯುವ ಕುಟುಂಬವೊಂದು ಇಂದು ಕತ್ತಾಳೆ ನಾರಿನ ಹಗ್ಗ ತಯಾರಿಕಾ ಘಟಕ ಪ್ರಾರಂಭಿಸಿರುವರು. ಅಲ್ಲದೆ ಬಹುತೇಕ ಕಂಬಳಿ ನೇಕಾರರ ಮಕ್ಕಳು ಆಧುನಿಕ ಶಿಕ್ಷಣ ಕ್ರಮದಿಂದಾಗಿ ಇಂದು ಬೇರೆ ಬೇರೆ ಊರುಗಳಲ್ಲಿ ಕೆಲಸವನ್ನರಸಿ ಹೋಗುತ್ತಿರುವುದರಿಂದ ಭವಿಷ್ಯದಲ್ಲಿ ಕಂಬಳಿ ಉದ್ಯೋಗ ತನ್ನ ಮೊದಲಿನ ವೈಭವವನ್ನು ಉಳಿಸಿಕೊಳ್ಳುವುದು ಅನುಮಾನಾಸ್ಪದವಾಗಿದೆ.

**ಕೊನೆ ಟಿಪ್ಪಣಿಗಳು**

೧. ಕೌಟಿಲ್ಯನ ಅರ್ಥಶಾಸ್ತ್ರ, ಪುಟ ೨೧೩

೨. ಸಿದ್ಧಮಂಕ ಚರಿತೆ, ಪುಟ ೩೨

೩. ಅದೇ, ಪುಟ ೩೨

೪. ಹೇಳಿದವರು: ಶ್ರೀಮತಿ ಎ.ಎಮ್.ಬಳಬಟ್ಟಿ

೫. ಕರ್ನಾಟಕದ ಕುರುಬರು ಪುಟ ೧೧೯

೬. ಹೇಳಿದವರು: ಶ್ರೀಮತಿ ಉಮಾ ಕುಂಬಾರ, ಸಾ. ಬಾನುವಳ್ಳಿ, ಜಿ. ದಾವಣಗೆರೆ

೭. ಕವಿವಿ ಹಂಪಿ, ವಿಶ್ವಕೋಶ ೨, ಪುಟ ೬೭

೮. ಅದೇ, ಪುಟ ೬೭

೯. ಹೇಳಿದವರು: ವಿಠ್ಠಲ ಯಂಕಪ್ಪ ಜಡಿಯಮ್ಮನವರ, ಸಾ. ಬೂದಿಹಾಳ

೧೦. ಕವಿವಿ ಹಂಪಿ, ವಿಶ್ವಕೋಶ ೨, ಪುಟ ೯೯

೧೧. ಭಾರತದ ಗೆಝೆಟಿಯರ್, ವಿಜಾಪುರ ಜಿಲ್ಲೆ, ಪುಟ ೪೨೩

೧೨. ಚನ್ನಪ್ಪ ಬೀರಪ್ಪ ಯಡಹಳ್ಳಿ, ಸಾ. ಬೂದಿಹಾಳ, ವಯಸ್ಸು ೭೮

೧೩. ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪುಟ ೧೦೩

೧೪. ಕರ್ನಾಟಕದ ಕುರುಬರು, ಪುಟ ೧೧೫

# ಅಧ್ಯಾಯ ೫

# ಸಮಾರೋಪ

ಜನಪದ ಜೀವನದಲ್ಲಿ ಕಂಬಳಿ ಕೇವಲ ಭೌತಿಕ ವಸ್ತುವಲ್ಲ. ಜನಪದರ ಸಾಮಾಜಿಕ, ಧಾರ್ಮಿಕ ನಡವಳಿಕೆಗಳಲ್ಲಿ ಇದಕ್ಕೊಂದು ಭಾವನಾತ್ಮಕ ಸಂಬಂಧವಿರುವುದರಿಂದ ಕಂಬಳಿಯನ್ನು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ಸಂಪ್ರಬಂಧದ ಉದ್ದೇಶವಾಗಿತ್ತು. ಅದನ್ನು ಈ ಪ್ರಬಂಧದುದ್ದಕ್ಕೂ ಸಾಧ್ಯವಾದಷ್ಟು ನಿರ್ವಹಿಸಲಾಗಿದೆ. ಕಂಬಳಿ ಜನಪದ ಬದುಕಿನೊಂದಿಗೆ ಹೊಂದಿದ ಅವಿನಾಭಾವ ಸಂಬಂಧವನ್ನು ಜನಪದೀಯ ಅಧ್ಯಯನದ ಸ್ವರೂಪವನ್ನೇ ಹಿನ್ನೆಲೆಯಾಗಿಟ್ಟುಕೊಂಡು ಪ್ರಬಂಧ ನಿರ್ವಚಿಸಲಾಗಿದೆ. ಈ ಅಧ್ಯಯನ ವಿಧಾನವೇ ಪ್ರಬಂಧಕ್ಕೆ ನ್ಯಾಯ ಒದಗಿಸಬಲ್ಲುದೆಂಬ ನಂಬಿಕೆಯಿದೆ. ಕಂಬಳಿಗೆ ಕಾಲ, ದೇಶಗಳ ಸೀಮೆ ಇಲ್ಲವಾದರೂ ಅಧ್ಯಯನದ ಅನುಕೂಲಕ್ಕಾಗಿ ಮೂರು, ನಾಲ್ಕನೇ ಅಧ್ಯಾಯದ ಬಹಳಷ್ಟು ವಿವರಣೆಗಳನ್ನು ಉತ್ತರಕರ್ನಾಟಕದ ಪರಿವ್ಯಾಪ್ತಿಯಲ್ಲಿಯೇ ಚರ್ಚಿಸಲಾಗಿದೆ. ಇಷ್ಟು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮುಂದಿನ ಅಧ್ಯಾಯಗಳಲ್ಲಿ ಹೇಳಲಾಗುವ ಅಂಶಗಳ ಸಾರವನ್ನು ಮೊದಲ ಅಧ್ಯಾಯವಾದ ಉದ್ದೇಶ-ಸ್ವರೂಪ-ವ್ಯಾಪ್ತಿ ಎಂಬ ಪ್ರಕರಣದಲ್ಲಿ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕಂಬಳಿಯ ಅರ್ಥ-ವ್ಯಾಖ್ಯೆಗಳನ್ನು ಹೇಳಿ ತರುವಾಯ ಪುರಾಣ, ಇತಿಹಾಸ, ವರ್ತಮಾನ ಈ ಮೂರೂ ಹಂತಗಳಲ್ಲಿ ಬೇರೆ ಬೇರೆ ಗ್ರಂಥಗಳಲ್ಲಿ ಕಂಬಳಿ ಉಲ್ಲೇಖಗೊಂಡಿರುವ ಬಗೆಯನ್ನು ಹೇಳಲಾಗಿದೆ. ತನ್ಮೂಲಕ ಕಂಬಳಿಯ ಪೌರಾಣಿಕ ಮಹತ್ವ, ಐತಿಹಾಸಿಕ ಪ್ರಾಚೀನತೆಯ ಜೊತೆಗೆ ವರ್ತಮಾನದಲ್ಲಿರುವ ಕಂಬಳಿಯ ಪ್ರಾಮುಖ್ಯತೆಯನ್ನು ಅರ್ಥೈಸಲಾಗಿದೆ.

ಕಂಬಳಿ ಕುರುಬ ಜನಾಂಗದವರ ಉತ್ಪಾದನೆಯಾದರೂ ಅದಕ್ಕೆ ಜಾತಿ-ಮತಗಳಾಚೆಗಿನ ಸಾರ್ವತ್ರಿಕ ಸ್ಥಾನಮಾನವಿರುವುದನ್ನು ಅದರೊಂದಿಗೆ ತಳಕು ಹಾಕಿಕೊಂಡಿರುವ ಸಂಪ್ರದಾಯ, ನಂಬಿಕೆ, ಆಚರಣೆಗಳಿಂದ ಗುರುತಿಸಲಾಗಿದೆ. ಜನಪದರು ಆಚರಣೆ-ಸಂಪ್ರದಾಯ-ನಂಬಿಕೆಗಳಲ್ಲಿ ಕಂಬಳಿಗೆ ಕೊಡುವ ವಿಶೇಷ ಮನ್ನಣೆಯನ್ನು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದರೊಂದಿಗೆ ಮೂರನೇ ಅಧ್ಯಾಯದಲ್ಲಿಯೇ ಕಂಬಳಿಯ ಉಪಯೋಗಗಳನ್ನು ವಿವರಿಸಲಾಗಿದೆ.

ಕುರುಬ ಜನಾಂಗದ ಅನೇಕರು ಕಂಬಳಿ ಉತ್ಪಾದನೆ ಮತ್ತು ಮಾರಾಟವನ್ನು ವೃತ್ತಿಯನ್ನಾಗಿ ಮಾಡಿಕೊಂಡಿರುವರು. ಇದರ ಕುರಿತಾಗಿಯೇ ಕಂಬಳಿ ಉದ್ಯಮ ಎಂಬ ನಾಲ್ಕನೇ ಅಧ್ಯಾಯದಲ್ಲಿ ವಿವರಣೆ ಕೊಡಲಾಗಿದೆ. ಈ ಅಧ್ಯಾಯದ ಮೊದಲ ಭಾಗದಲ್ಲಿ ಉಣ್ಣೆಯಿಂದ ಕಂಬಳಿ ಸಿದ್ಧಗೊಳ್ಳುವ ವರೆಗಿನ ವಿವಿಧ ಹಂತಗಳನ್ನು ವಿವರಿಸಲಾಗಿದೆ. ಎರಡನೆಯ ಭಾಗದಲ್ಲಿ ಕಂಬಳಿ ಮಾರಾಟದ ಬಗೆಗಳನ್ನು ಹೇಳಿ ಸಹಕಾರಿ ಸಂಘವೊಂದರ ಉದಾಹರಣೆ ಮೂಲಕ ಕಂಬಳಿ ಉದ್ಯಮದ ಕುರಿತಾಗಿಯೂ ಸಾಧ್ಯವಾದಷ್ಟು ನಿಖರ ಮಾಹಿತಿಯನ್ನು ಒದಗಿಸಲಾಗಿದೆ.

ಐದನೆಯ ಅಧ್ಯಾಯ ಮೇಲಿನ ಎಲ್ಲ ಪ್ರಕರಣಗಳ ಸಾರಾಂಶವನ್ನು ಕ್ರೋಢೀಕರಿಸಿ ಪರಿಸಮಾಪ್ತ ಗೊಳಿಸುವ ಸಮಾರೋಪವಾಗಿದೆ.

ಕಂಬಳಿ ವಿಷಯಕ್ಕೆ ಲಿಖಿತ ಆಕರಗಳು ಕಡಿಮೆ. ಅದುದರಿಂದ ಬರವಣಿಗೆಗೆ ಕ್ಷೇತ್ರಕಾರ್ಯವನ್ನೇ ಆಶ್ರಯಿಸಬೇಕಾಯಿತು. ಜಾನಪದ ಅಧ್ಯಯನದಲ್ಲಿ ಲಿಖಿತ ಸಾಮಗ್ರಿಗಳಿಗಿಂತ ಕ್ಷೇತ್ರಕಾರ್ಯ ಹೆಚ್ಚಿನ ಮಾಹಿತಿಗಳನ್ನು ಒದಗಿಸುವುದಲ್ಲದೇ ಅಧ್ಯಯನಕ್ಕೊಂದು ಖಚಿತತೆ ಪ್ರಾಪ್ತವಾಗುತ್ತದೆ ಎಂಬ ಅಭಿಪ್ರಾಯ ದಿಂದಾಗಿ ಕ್ಷೇತ್ರಕಾರ್ಯದಲ್ಲಿ 'ಸಂದರ್ಶನ ವಿಧಾನ'ವನ್ನು ಅನುಸರಿಸಲಾಗಿದೆ. ಸಂದರ್ಶನ ವಿಧಾನದಲ್ಲಿ ವಕ್ತೃವಿನೊಡನೆ ಉದ್ದೇಶಿತ ವಿಷಯವನ್ನು ನೇರವಾಗಿ ಪಡೆಯುವುದರಿಂದ ಅಥವಾ ಚರ್ಚಿಸುವುದರಿಂದ ಇದು ಉಚಿತ ವಿಧಾನವೆನ್ನಿಸಿದೆ. ಹಾಗಾಗಿ ಈ ವಿಧಾನವನ್ನೇ ಈ ಅಧ್ಯಯನಕ್ಕೆ ಅನುಸರಿಸಲಾಗಿದೆ.

ಕಂಬಳಿ ಕುರಿತಾದ ಸಂಪ್ರದಾಯ, ನಂಬಿಕೆಗಳಿಗೆ ಕಂಬಳಿ ಉದ್ಯಮಕ್ಕೆ ಹತ್ತಾರು ಊರುಗಳನ್ನು ಅಲೆದಾಡಿ ಸಾಕಷ್ಟು ಜನರಿಂದ ವಿಷಯ ಸಂಗ್ರಹಿಸಲಾಗಿದೆ. ಕಂಬಳಿ ಮಗ್ಗಗಳಿರುವ ಊರುಗಳಿಗೇ ಹೋಗಿ ಮಗ್ಗದ ಕಾರ್ಯವಿಧಾನ, ಮಗ್ಗದ ಬಿಡಿಭಾಗಗಳನ್ನು ಕಲಾವಿದರೊಬ್ಬರ ಸಹಾಯದಿಂದ ಚಿತ್ರ ಬರೆಸಿ ಅವುಗಳಿಗೆ ಆಯಾ ಹೆಸರನ್ನು ಕೊಟ್ಟು ಅವನ್ನು ಅನುಬಂಧದಲ್ಲಿ ನಮೂದಿಸಲಾಗಿದೆ. ಈ ಮೂಲಕ ಕಂಬಳಿಯ ಕೈಮಗ್ಗ ನೇಯ್ಗೆಗೆ ಸಂಬಂಧಿಸಿದ ಪರಿಭಾಷೆಯೊಂದು ಪ್ರಬಂಧದಲ್ಲಿ ದಾಖಲುಗೊಂಡಂತಾಗಿದೆ. ಆಧುನಿಕ ವಾತಾವರಣಕ್ಕೆ ಪಕ್ಕಾಗಿ ಮಗ್ಗಗಳು ಮರೆಯಾಗುತ್ತಿರುವ ಇಂದಿನ ಸಂದರ್ಭದಲ್ಲಿ ಇಂಥದೊಂದು ಪರಿಕ್ರಮ ಭವಿಷ್ಯತ್ತಿನಲ್ಲಿ ಎಷ್ಟೊಂದು ಉಪಯುಕ್ತ ಮಾಹಿತಿಯಾಗಬಲ್ಲುದು ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಕಂಬಳಿ ನೇಯ್ಗೆಯ ಬೇರೆ ಬೇರೆ ಸಂದರ್ಭಗಳ ಛಾಯಾಚಿತ್ರಗಳನ್ನೂ ಅನುಬಂಧದಲ್ಲಿ ಸೇರಿಸಲಾಗಿದೆ.

ಕಂಬಳಿಗೆ ಸಂಬಂಧಿಸಿದ ಜನಪದ ಹಾಡುಗಳನ್ನೂ ಅನುಬಂಧದಲ್ಲಿ ಸಂಗ್ರಹಿಸಲಾಗಿದೆ. ಕಂಬಳಿ ಯೊಂದಿಗೆ ಭಾವನಾತ್ಮಕ ಸಂಬಂಧವಿರಿಸಿಕೊಂಡಿರುವ ಜನಪದರು ಅದನ್ನು ಕುರಿತಾಗಿ ಅನೇಕ ಡೊಳ್ಳಿನ ಹಾಡುಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಕಂಬಳಿಯ ಪಾವಿತ್ರ್ಯತೆ, ಉಪಯೋಗಗಳನ್ನು ಅತ್ಯಂತ ಭಾವುಕವಾಗಿ ನೆನೆಯುತ್ತಾರೆ. ಕೆಲವು ಜನಪದ ಕವಿಗಳಂತೂ ಇನ್ನೂ ಮುಂದೆ ಹೋಗಿ ಕಂಬಳಿಯ ಹುಟ್ಟನ್ನು ಅಲೌಕಿಕವೆಂದು ಭಾವಿಸಿ ದೇವತೆಗಳೊಂದಿಗೂ ಕಂಬಳಿಯ ನಂಟನ್ನು ಬೆಳೆಸಿದ್ದಾರೆ.

ಅನುಬಂಧದ ಮತ್ತೆರಡು ಭಾಗಗಳಾಗಿ ಆಕರ ಸಾಹಿತ್ಯ ಮತ್ತು ವಕ್ತೃವಿವರಗಳು ಸೇರಿಕೊಂಡಿವೆ.

ಪ್ರಸ್ತುತ ಪ್ರಬಂಧದ ವಿಶೇಷತೆಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

೧. ಕಂಬಳಿ ಕುರಿತಾದ ಸಾಂಸ್ಕೃತಿಕ ವಿಶ್ಲೇಷಣೆಯೇ ಪ್ರಬಂಧದ ಪ್ರಧಾನ ಆಶಯವೆನ್ನಿಸಿದೆ.

೨. ಪುರಾಣ ಹಾಗೂ ಪ್ರಾಚೀನ ಸಾಹಿತ್ಯದಲ್ಲಿಯೂ ಕಂಬಳಿ ಉಲ್ಲೇಖಗೊಂಡಿರುವುದನ್ನು ವಿವರಿಸಲಾಗಿದೆ.

೩. ಜನಪದರ ಸಾಮಾಜಿಕ ಬದುಕಿನ ವಿವಿಧ ಘಟ್ಟಗಳ ಸಂಪ್ರದಾಯಗಳಲ್ಲಿ ಕಂಬಳಿಗಿರುವ ಪ್ರಾಮುಖ್ಯತೆಯನ್ನು ಪ್ರಸ್ತಾಪಿಸಲಾಗಿದೆ.

೪. ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿರುವ ಕಂಬಳಿ ಉದ್ಯಮದ ನಡೆಯ ಕುರಿತಾದ ವಿವರಣೆ ಕೊಡಲಾಗಿದೆ.

೫. ಕಂಬಳಿ ನೇಯ್ಗೆಯ ವಿಷಯ, ಕಂಬಳಿ ಉತ್ಪಾದನೆಯ ಸಹಕಾರಿ ಸಂಘಗಳ ಮಾಹಿತಿ ಕ್ಷೇತ್ರಕಾರ್ಯಾಧಾರವಾಗಿದೆ.

೬. ಅನುಬಂಧದಲ್ಲಿ ಸಂಗ್ರಹಗೊಂಡ ರೇಖಾಚಿತ್ರಗಳು, ಅವುಗಳ ಪಾರಿಭಾಷಿಕ ಪದಗಳು ಮಹತ್ವದ ದಾಖಲೆಗಳಾಗಬಲ್ಲವೆಂದು ಭಾವಿಸಲಾಗಿದೆ.

೭. ಕಂಬಳಿ ಕುರಿತಾದ ಇಷ್ಟೊಂದು ಸಂಖ್ಯೆಯ ಹಾಡುಗಳು ಮೊದಲ ಬಾರಿಗೆ ಒಂದೆಡೆ ದೊರಕುತ್ತಿರುವುದು ವಿಶೇಷವೆನ್ನಿಸಿದೆ.

# ಕಂಬಳಿ ಕುರಿತು ಹಾಡುಗಳು

೧

ಕಂಬಳಿ ಹೆಳವ ಎಷ್ಟಂತ್ಹೇಳಲಿ
ಮರಾದಿ ಕೊಡುವುದು ಕಂಬಳಿಯೋ ||

ಸಿದ್ಧ ಸಾಧುರ ಗದ್ದಿಗೆಯೊಳಗ
ಎದ್ದ ಕಾಣುವದು ಕಂಬಳಿಯೋ......||

ಪಟ್ಟದ ದೇವರ ಪಲ್ಲಕ್ಕಿಯೊಳಗ
ಕಾಣಿಸಿಕೊಂಡಿತೊ ಕಂಬಳಿಯೋ ||

ಬೀಗರು ಬಿಜ್ಜರು ಮನಿಗೆ ಬಂದರ
ಮರಾದಿ ಕೊಡುವದು ಕಂಬಳಿಯೋ ||

ಮಳೆಗಾಗಿ ರೈತ ಮುಗಲ ನೋಡಿದಾಗ
ಮಳೆಯ ಕರೆದಿತೋ ಕಂಬಳಿಯೋ ||

ಹಡದ ಬಾಣತಿ ಬಯಲಿಗೆ ಬರುವಾಗ
ಮರಾದಿ ಕೊಡುವದು ಕಂಬಳಿಯೋ ||

ಕಂಬಳಿ ಹೆಳವ ಎಷ್ಟಂತ್ಹೇಳಲಿ.......

ಒದಗಿಸಿದವರು: ಬಸವರಾಜ ಕುರಿ
ಸಾ. ದೇವಲಾಪುರ, ತಾ. ಬಾಗಲಕೋಟೆ

೨

ಆದಿಯಲ್ಲಿ ಇತ್ತ ಕಂಬಳಿ
ಹಾಲಮಂತದಾಗ ಹುಟ್ಟಿತ್ತ ಕಂಬಳಿ
ಯಾರ ಧರಮಕ ಅರಿವಿಗಿ ಬಂತೊ
ಮರಿಯದಾತ ಕಂಬಳ್ಯೊ ||೧||

ತೇಜಿಯ ಬೆನ್ನಮ್ಯಾಲ ನೆಪ್ಪಾತ ಕಂಬಳಿ
ಬಸವಣ್ಣನ ಹಣಿಮ್ಯಾಲ ಗೊಂಡ್ಯಾತ ಕಂಬಳಿ
ಬಾಲೇರ ಮಗ್ಗಿತಗದ ಆನಿಮ್ಯಾಲ ಚಂದ
ಜೂಲನಾತ ಕಂಬಳ್ಯೋ ||೨||

ಕೂರಿಗಿ ಬಡ್ಡ್ಯಾಗ ಹಾಸು ಕಂಬಳಿ
ಕಣದಾಗ ರಾಶಿ ತುಂಬು ಕಂಬಳಿ
ಬಂಡಿರೈತನ ಮುಂಡಿ ಮ್ಯಾಲಿರುವ
ಹಂಡನೀಲಗಂಬಳ್ಯೋ ||೩||

ಸ್ಯಾಸಕ್ಕಿ ಹೊಯ್ಲಾಕ ಬಂದ ಕಂಬಳಿ
ಬಾಣತಿ ಮೈಮ್ಯಾಲ ಹೊಚ್ಚು ಕಂಬಳಿ
ಸೋಸಿದ ಉಣ್ಣೆ ಕೂಸಿನ ಕೈಯಲ್ಲಿ
ಕಡೇನಾತ ಕಂಬಳ್ಯೋ ||೪||

ಬೀಗರ ಬಂದಾಗ ಹಾಸು ಕಂಬಳಿ
ಸರುವರಿಗೆಲ್ಲ ಬೇಕಾತ ಕಂಬಳಿ
ಸಾಯಿಬ ಸುಬೇದಾರಿಗಿ ಉಲಾನ ಕೋಟ
ಜಾಕೀಟನಾತ ಕಂಬಳ್ಯೋ ||೫||

ದಿಮ್ಮಿನ ಬಡ್ಡ್ಯಾಗ ಹಾಸು ಕಂಬಳಿ
ವಾಲಗದಾಗ ನಡಕಟ್ಟು ಕಂಬಳಿ
ಸಿದ್ದಬೀರನ ಹಬ್ಬದ ಕಾರೇಕ
ಮಟ್ಟಿನಾತೊ ಕಂಬಳ್ಯೋ ||೬||

ಆಶಾಗ ಈಶ್ಯಾಗ ಆದ ಕಂಬಳಿ

ನಿಶಾನಿ ಕೋರಿ ಕಾಂತ ಕಂಬಳಿ

ಇಂಗ ಜೀರಿಗಿ ಮಾರು ಶೆಟ್ಟಿಗೆ

ಕೋರಿನಾತ ಕಂಬಳ್ಯೋ ||೭||

ಸಿದ್ಧ ಸಿದ್ಧರಿಗಿ ಇದ್ದ ಕಂಬಳಿ

ಸರುವ ಧರಮಕ ಬೇಕಾತ ಕಂಬಳಿ

ಬೀಜಾಳ ಗುತ್ತಿ ಮ್ಯಾಲ ಮಾಳಪ್ಪ ವಾದಾ ಹಾಕಿ

ಮಳಿಯ ಕರದ ಕಂಬಳ್ಯೋ ||೮||

**ಹಾಡಿದವರು: ಕರಿಯಪ್ಪ ಮುಪ್ಪಯ್ಯ ಪೂಜಾರಿ**

ಸಿದ್ದಪ್ಪ ಸಾಬಣ್ಣ ಬಿದರಿ

೩

ಚೆನ್ನಮ್ಮನ ಕೂಡಿಕೊಂಡ ಪದ್ಮಗೊಂಡ ಕಾಡಿನಲ್ಲಿ ಕುರಿ ಮೇಸಿದನೋ | ಆದಿ ರೇವಣ ಗುರು ಅಲ್ಲಿ ಬಂದಿದನೋ ||೧||

ನೀವಿಬ್ಬರು ಈ ಲೋಕ ಅಪವಾದಕ ಇರುವುದು ಒಳಿತಲ್ಲ ಜಲ್ಮವನೋ | ಸತಿಪತಿಗಳಾಗಿ ಮಾಡ್ರಿ ಬಾಳ್ವೆಯನೋ | ದೇವಗಣ ತೆತ್ತೀಸಕೋಟಿ ಮತ್ತ ಅಮರಗಣ ಆದಿ ನಾಯಕನೋ ವೀರಂಚ ||೨||

ಚತುರನನು ಬಂದಿದನೋ ||೩||

ಜಾತಕ ತಗದ ವಧುವರರ ನೇಮಿಸಿದಾರ ಉಣ್ಣಿ ಹಿಂಜಿ ಹುರಿ ಮಾಡಿದನೋ | ಅಡವಿ ಅರಿಷಿಣ ಬೇರೊಂದ ತಂದಿದನೋ ||೪||

ಸುರಿಗಿ ಸುತ್ತಿ ನೀರೆರದ ಕಂಕಣ ವಧುವರರಾದ ಮದಿಮಕ್ಕಳನೋ | ಮಸ್ತಕದಲಿ ಬಾಸಿಂಗ ಧರಿಸಿದನೋ ||೫||

ಲಗ್ನ ಆರೋಪಣ ಐರಾಣಿ ಆರತಿ ಅಕ್ಕಿಕಾಳ ಬಿದ್ದು ಅಕ್ಷತನೋ- ಸಾಮ ಧೋಮ ಮಹಾ ಮಂತರನೋ ||೬||

ಇವರ ಉಪಜೀವನಕ ಉದ್ಯೋಗ ಬೇಕಂತ ರೇವಣಸಿದ್ಧ ಸಹಾಯ ಮಾಡಿದನೋ | ಹನಿ ಬೆವರ ನೆಲಕ ಬಿತ್ತ ನೀರವನೋ ||೭||

ಬೈಲಗಂಬಾರ ಹುಟ್ಟಿ ಬಂದ ಮುಂದ ನಿಂತ ರೇವಣ ಗುರುವಿನ ಕೇಳಿದನೋ | ತ್ರಿಶೂಲ ಮುರದ ಕತ್ತರಿ ಮಾಡಿದನೋ ||೮||

ಕುರಿ ಕತ್ತರಿಸುವ ಕ್ರಮಗಳ ರೇವಣ ಪದ್ಮಗೊಂಡಗ ತಿಳಿಸಿದನೋ | ಬೆತ್ತಸೀಳಿ ಬೆಲ್ಲ ಅಂಪ ಮಾಡಿದನೋ ||೯||

ಉಣ್ಣಿಹಿಂಜಿ ಹುರಿ ಮಾಡಿ ಚೆನ್ನಮ್ಮ ರಾಟಿದಿಂದ ತಗದ ನೂಲವನೋ | ರೇವಣ್ಣ ತಗದ ಒಂದ ಯುಕ್ತಿಯನೋ ||೧೦||

ತನ್ನ ಕಿಡಿಗಣ್ಣಿನಿಂದ ಉಂಚಿ ಹುಟ್ಟಿಸಿದಾನ ಚಿಲ್ಲ ಬೀಜ ಮಾಡಿದನೋ | ಮಗ್ಗ ಹೂಡಿ ನೇಯುವ ನೇಮ ಕಲಿಸಿದನೋ ||೧೧||

ಸಿಸ್ತಿಲಿಂದ ಶಿವಪದ್ಮ ಮಗ್ಗ ಹಾಕಿ ಕಿರಿ ಜಾಡಿ ಕಂಬಳಿ ನೇದಿದನೋ. ರೇವಣಚ್ಯಾರಿ ಮಸ್ತಕದಲಿ ಧರಿಸಿದನೋ ||೧೨||

ಸೊಗಲದಾಗ ಶಿವಪಾರ್ವತಿ ಲಗ್ನಕ ಶ್ಯಾಸಕಿ ಹೊದದ್ದ ಕಂಬಳಿನೋ | ಶ್ಯಾಲ ಶೆಕಲತಿ ಮೀಸಲ ಕಂಬಳಿನೋ ||೧೩||

ಸತ್ತರಗಿ ನೆರಳಾಗ ಸರಸಗಂಬಳಿ ಪಲ್ಲಕ್ಕಿ ಮ್ಯಾಲಿರುಕಂಬಳಿನೋ | ಹರಿಹರಗ ಬೇಕಾಗು ಕಂಬಳಿನೋ ||೧೪||

ಮದಿವಿಗಿ ಬೇಕಾಗು ಮಲ್ಲಗಂಬಳಿ ಗಾಳಿಗಂಡ ಮಳಿ ಮಿಂಡ ಕಂಬಳಿನೋ | ಹುಲಿಜಂತಿ ಮಾಳಪ್ಪ ಹೊರು ಕಂಬಳಿನೋ ||೧೫||

ಕುರಿ ಹಿಕ್ಕಿ ಒಳಗ ಲಿಂಗ ಪ್ರತಿಷ್ಠೆ ಮಾಡಿ ವೀರಗೊಲ್ಲಾಳನ ಕಂಬಳಿನೋ | ಗೊಲಗೇರಿ ಲಿಂಗನ ಗದಿಗಿ ಕಂಬಳಿನೋ ||೧೬||

ರೈತ ಬಾಂಧವರು ರಾಶಿ ಮಾಡುವಾಗ ಮೇಟಿಗಿ ಹಾಕುವ ಕಂಬಳಿನೋ | ಜಗಜನನಿ ಜಗದೀಶನ ಕಂಬಳಿನೋ ||೧೭||

ಭಜರತ ಮಂಡಳಿ ಬಹುಮಾನ ಕಂಬಳಿ ಪಂಚಾಯತಿಗಿ ಹಾಸುವ ಕಂಬಳಿನೋ | ಗುರು ಆಸನ ಗುರುಪಾದ ಕಂಬಳಿನೋ ||೧೮||

ಧರಿಯೊಳು ಮೆರಿಯುವ ಶ್ಯಾರ ಯಾದವಾಡ ಬೀರದೇವರ ಜಾಡಿ ಕಂಬಳಿನೋ | ರಾಮಚಂದ್ರ ಬೀರಪ್ಪಗ ಕಂಬಳಿನೋ ||೧೯||

**ಒದಗಿಸಿದವರು: ಸಿದ್ದಪ್ಪ ಬಸಪ್ಪ ಸಿಂಗಾಡಿ,** ದಾದನಟ್ಟಿ, ವಯಸ್ಸು ೬೦

**ತಾ.ಮುಧೋಳ, ಜಿಲ್ಲೆ ಬಾಗಲಕೋಟೆ.**

೪

ಸತ್ಯ ಶರಣರ ಮಕ್ಕಳು ನೀವು ಎಚ್ಚರಿಟ್ಟ ನಡಿಯಬೇಕ ಹಾಲುಮತದ ಒಳಗ ಹುಟ್ಟಿದ್ದು ಹರಿಹರನೋ ||೧||

ಕಾಮಧೇನು ತಾನಃ ಬಂದು ಮೇಲು ಜಡಿಯೊಳು ಹಾಲ ಕರದ ಹರದ ಬಂದು ನಿಂತಿದ್ದ ಆತೊ ಹರಿ ಹರನೋ ||೨||

ಕಾಮ ಋಷಿ ಬಂದ ಗುರುವಿನ ನಾಮ ಸ್ಮರಣಿ ಮಾಡುವಾಗ ಹೋಮ ಋಷಿ ಹ್ಯಾಯನಾದೋ ಹರಿಹರನೋ ||೩||

ಮೂರು ಮಂದಿ ಮುನಿಗಳು ಕೂಡಿ ನೇಮದಿಂದ ಜಾಡಿನೇದ ಶಿವಗ ಮುಯ್ಯ ಮಾಡುನಂದ್ರ ಹರಿಹರನೋ ||೪||

ಬ್ರಹ್ಮ ಬಂದ ಬೆಚಾ ಕಟ್ಟಿ ನಾರದ ಬಂದ ಲಾಳಿ ಒಗದ ವಿಷ್ಣು ಬಂದ ಜಾಡಿ ನೇದ ಹರಿಹರನೋ ||೫||

ಬ್ರಹ್ಮ ವಿಷ್ಣು ನಾರದ ಕೂಡಿ ಮೂರು ಮಂದಿ ಜಾಡಿ ನೇದ ಶಿವಗ ಮುಯ್ಯ ಮಾಡತಾರ ಹರಿಹರನೋ ||೬||

ಹೋಮಗಂಬಳಿ ಹೋಮಕಿಟ್ಟ ನೇಮಗಂಬಳಿ ಗದ್ದಿಗಿ ಮಾಡಿ ಮಲ್ಲಗಂಬಳಿ ಹೊತ್ತ ಕುಂತ ಶಂಕರನೋ ||೭||

ಸೀತಮುನಿ ಶರಣರ ಬಂದ ಶಿವಗ ಶಿವದಾರ ಹಾಕುವಾಗ ಜಂಗ ಜೋಳಿಗಿ ಸಂಬಗಾತ ಹರಿಹರನೋ ||೮||

ಇಪ್ಪತ್ತೊೀಳ ನಕ್ಷತ್ರ ಸುತ್ತ ಮುತ್ತ ಹಂದರ ಗಂಬ ಶಿಗರಿ ದಳಲಾಗ ಶಿವನಲಗ್ನ ಹರಿಹರನೋ ||೯||

ದೇಶದೊಳು ಯಾದವಾಡ ಶ್ಯಾರಾ ನಮ್ಮ ದೇವರ ಶಿವಸಿದ್ಧ-ಬೀರಾ ರಾಮಚಂದ್ರ ಬೀರಪ್ಪಗ ಒಲದ ಹರಿಹರನೋ ||೧೦||

ಒದಗಿಸಿದವರು: ಸಿದ್ದಪ್ಪ ಬಸಪ್ಪ ಸಿಂಗಾಡಿ, ದಾದನಟ್ಟಿ, ವಯಸ್ಸು ೬೦
ತಾ.ಮುಧೋಳ, ಜಿಲ್ಲೆ ಬಾಗಲಕೋಟೆ.

೫

ಕೈಲಾಸದಾಗ ಇತ್ತೋ ಕಂಬಳಿ
ಸತ್ಯ ಶರಣರು ಹೊರುವ ಕಂಬಳಿ
ಮಾದೇವನ ಭಕ್ತಿಗಿ ಮೆಚ್ಚಿ ಗದ್ದಿಗಿ ಮೊದಲಾದೀತೋ ಕಂಬಳಿ
ಬೀಜಗುಂತಿ ಮ್ಯಾಗ ಇದ್ದ ಕಂಬಳಿ
ಬಿಸಾಡಿ ಮಳಿಗಳ ಕರದ ಕಂಬಳಿ
ಹಳ್ಳಿಹಣಬರ ಡಿಳಿ ಬಾಸೇರ ಮನಿಯಾಗಿತ್ತೋ ಕಂಬಳಿ

ಹುನ್ನೂರ ಸ್ಥಳದಾಗ ಇದ್ದ ಕಂಬಳಿ
ಮೂರು ಲೋಕದಾಗ ಮೆರದಿದ್ದ ಕಂಬಳಿ
ಹಾಲಿನಂತ ಮನಸ ಇದ್ದ ಕುರುಬಗ ವರು ಕೊಟ್ಟೀತ ಕಂಬಳಿ

ಬಂದ ಬೀಗರು ಕೂಡ್ರುವ ಕಂಬಳಿ
ಕಲಿಯುಗದೊಳಗೂ ಇದ್ದ ಕಂಬಳಿ
ಹಾವಾಗಿ ಹರದಾಡೋ ಬೆಂಕ್ಯಾಗಿ ಎರದಾಡೋ ಚೋಳಾಗಿ ಚಿಮ್ಯಾಡು ಕಂಬಳಿ

ಹುಲಜಂತಿ ಮಠದಾಗ ಇದ್ದ ಕಂಬಳಿ
ದುಷ್ಟರನ ನಾಶ ಮಾಡಿತೋ ಕಂಬಳಿ
ಸತ್ಯವಂತ ನನ್ನ ಶರಣ ಮಾಳಪ್ಪನ ಹಿಂಬಾಲ ಇರುವ ಕಂಬಳಿ

ಅವರಾದಿ ಊರಾಗ ಇರುವ ಕಂಬಳಿ
ಹಾಡು ಮ್ಯಾಳಕ ವರುವ ಕೊಟ್ಟೀತ ಕಂಬಳಿ
ಸಣ್ಣ ಕಂದ ನಮ್ಮ ಕವಿಗಾರ ಬೀರಪ್ಪಗ ಸಾಮೀಲಾದಿತೋ ಕಂಬಳಿ

ಹೇಳಿದವರು : ಬಸಪ್ಪ ಕರೆಪ್ಪ, ಪೂಜೇರ
ಸಾ.ತಿಮ್ಮಾಪುರ, ತಾ.ಗೋಕಾಕ

ಶಾಂತದಿಂದ ಕುಂತ ಕೇಳರಿ ಕೂಡಿದ ಹಿರಿಯಾರಾ |
ಹೇಳತೀವ ನಾವೂ ಕಂಬಳಿ ವಿಸ್ತಾರಾ ||

ಕುರಿಯಕಿಂತ ಮೊದಲ ಕಂಬಳಿ ಹುಟ್ಟಿತ ಪೂರಾ
ಆಧಾರಕ ಹಚ್ಚಿ ನಿಮಗ ಹೇಳುವೆ ಪೂರಾ
ಕೈಲಾಸದೊಳಗ ಒಂಭತ್ತುಮಂದಿ ಸಿದ್ಧರು ಇದ್ದಾರಾ
ಭಕ್ತಿಲಿಂದ ನಿತ್ಯ ಅವರು ತಪವಗೈದಾರಾ

ತಪ ಮುಗಿದ ಕಾಲಕ ಅವರು ಹೋಮ ಹೂಡ್ಯಾರಾ
ಭಕ್ತಿಗಿ ಮೆಚ್ಚಿ ಶಿವ ಹರಿ ಬ್ರಹ್ಮಾದಿ ದೇವತೆಗಳು ಹೋಮಕ್ಕೆ ಬಂದಾರಾ
ಒಂಭತ್ತು ಸಿದ್ಧರೀಗಿ ಶಿವನು ಆಲಿಂಗನ ಮಾಡತಾರಾ
ಶಿವನ ಜಡೆಯಿಂದ ಕೆಲವು ರೋಮ ಉದರ್‍ಯಾವ ಪೂರಾ

ಬ್ರಹ್ಮದೇವರ ವಿಷ್ಣುದೇವರ ಇಬ್ಬರು ಕೂಡ್ಯಾರಾ
ಅದ ರೋಮದಿಂದ ಎರಡು ಏಣೆನ ಜ್ಯಾಡಿ ನೇದಾರಾ
ಹೋಮಗಂಬಳಿ ಎಂದು ಅವರು ಹೆಸರಿಟ್ಟಾರಾ
ಸಿವಸಿದ್ಧರೊಳಗ ಶಿವಗಿನಿ ಸಿದ್ಧ ಎಂಬವರಾ

ಶಿವಗಿನಿ ಸಿದ್ಧಗ ಶಿವನು ಅದೇ ಜಾಡಿ ಕೊಟ್ಟಾರಾ
ಶಿವಗಿನಿ ಸಿದ್ಧ ಮುಂದ ಮಾಳಿಗಿ ರಾಯಣ್ಣ ಅವತಾರಾ
ಅದೇ ಜಾಡಿ ಹೊತ್ತ ಮೆರದೊ ಮಾಳಪ್ಪ ದೇವರಾ
ಸುಳ್ಳಲ್ಲ ಪುರಾಣದಾಗ ಐತೋ ಆಧಾರಾ

ಸಂದ ಮುಗಿತಿ ಮುಂದ ಕೇಳರಿ ಕುಂತ ಜನರಾ
ಬೆಳಗಾಂವ ಜಿಲ್ಲಾ ರಾಮದುರ್ಗ ತಾಲೂಕ ಅವರಾದಿ ಊರಾ
ಪವಾಡ ಪುರುಷ ನೆನದಾನೋ ಅಲ್ಲಿ ಮಾಳಪ್ಪ ದೇವರಾ
ಕವಿಗಾರ ಬೀರಪ್ಪ ಸೋಸಿ ತಗದೋ ಕಂಬಳಿ ವಿಸ್ತಾರಾ

ಕೊಟ್ಟವರು: ಬಸಪ್ಪ ಕರೆಪ್ಪ ಪೂಜೇರ
ಸಾ.ತಿಮ್ಮಾಪೂರ, ತಾ.ಗೋಕಾಕ

ಸಕಲಸೃಷ್ಟಿ ರೂಪಕನಾದ ಸರ್ವೇಶ್ವರ ಶಂಕರನು ಸರ್ವಬ್ರಹ್ಮಾಂಡಕ ಒಬ್ಬನೇ ಅಧಿಕಾರನೋ ||೧||

ಪೃಥ್ವಿ ಅಪ್ ತೇಜ ವಾಯು, ಆಕಾಶ ಐದ ತತ್ವ ಪಂಚಭೂತ ಪರಮೇಶ್ವರ ಹುಟ್ಟಿಸಿದನೋ ||೨||

ಒಂದೊಂದ ತತ್ವದಿಂದ ಚಂದ ಚಂದ ಮುನಿಗೋಳ ಹುಟ್ಟಿ ಅವರ ಹೆಸರ ಬ್ಯಾರಿ ಬ್ಯಾರಿ ಹೇಳುವೆನೋ ||೩||

ರಾಮ ಮುನಿ ಹೋಮ ಮುನಿ ಶೀಲ ಮುನಿ ಜಾಂಬ ಮುನಿ ಕಲ್ಪಮುನಿ ಎಂಬ ಐವರನೋ ||೪||

ನಿರಾಕಾರ ನೀರಿನಲ್ಲಿ ಗುಪ್ತದಿಂದ ಇದ್ದಾರ ಅವರು ಶಕ್ತಿಸಾಂಬ ಇಬ್ಬರು ಕೂಡಿ ಜೋಡವನೋ ||೫||

ಪಟ್ಟಕಟ್ಟಿ ಪರಮೇಶ್ವರನ ದಶಹತ್ತು ಮುನಿಗೋಳ ಕೂಡಿ ರಾಮ ಮುನಿ ನಾಮಕರಣ ಮಾಡಿದನೋ ||೬||

ಹೋಮಮುನಿ ನೇಮದಿಂದ ಸ್ವಾಮಿಯಲ್ಲಿ ನಿಷ್ಠಾಭಕ್ತಿ ಪ್ರಾತಃಕಾಲ ಸಂಧ್ಯಾಣ ಹೋಮವನೋ ||೭||

ಶೀಲಮುನಿಶಂಕರಗ ಶಿವದಾರ ಕಟ್ಟಿದಾರ ದಕ್ಷಾಬದ್ಧ ಮುಕ್ತಿ ಮಾರ್ಗ ತೋರಿದನೋ ||೮||

ಕಲ್ಪಮುನಿ ಕಾಮಧೇನು ನಂದಿನಿ ಎಂಬು ಗೋವಿನಿಂದ ಧರಿಮ್ಯಾಲ ಹರಿಸಿದಾನ ಹಾಲವನೋ ||೯||

ಅಗ್ನಿ ಮುನಿ ವಾಯು ಮುನಿ ವರಕ ಮುನಿ ಮೂವರು ಕೂಡಿ ರೋಮ ತಂದ ನಡಸಿದಾರ ಕೆಲಸವನೋ ||೧೦||

ಹೋಮಗಂಬಳಿ ನೇಮಗಂಬಳಿ ಮಲ್ಲಗಂಬಳಿ ಮದಲ ಮಾಡಿ ಮೂರು ಕಂಬಳಿ ಬೆಜಾ ಹಾಕಿದ ಬ್ರಹ್ಮದೇವನೋ ||೧೧||

ನಾರಾಯಣ ಲಾಳಿ ಒಗದ ವಿಷ್ಣು ಬಂದ ಕಂಬಳಿ ನೇದ ಮಹೇಶ್ವರಗ ಬಹುಮಾನ ಕೊಟ್ಟ ಕಂಬಳಿ ವಸ್ತ್ರವನೋ ||೧೨||

ಅಗ್ನಿಯಿಂದ ನೇಮಗಂಬಳಿ ಶಿವಾ ತನ್ನ ಗದ್ದಿಗಿ ಮಾಡಿ ಉದಕದಿಂದ ಹುಟ್ಟಿಸಿದ ಮಲ್ಲ ಕಂಬಳಿನೋ ||೧೩||

ಹೋಮಕಾಗಿ ಹೊದಿಸಿದಾರ ನೇಮಕಾಗಿ ಮಹೇಶ್ವರನು ಸೃಷ್ಟಿ ಆಳು ಸೂರ್ಯಾಚಂದ್ರನ ಹುಟ್ಟಿಸಿದನೋ ||೧೪||

ಪಟ್ಟಗಟ್ಟು ಸಮಯದಲ್ಲಿ ಗುಗ್ಗಳದ ಹೋಮದಲ್ಲಿ ಬಾಲ ಕಂದ ಒಬ್ಬನೇ ಜನಿಸಿದನೋ ||೧೫||

ದೇವದಾನವರು ಎಲ್ಲರೂ ಕೂಡಿ ಮತನ ಮಾಡು ಕಾಲಕ ಹದಿನಾಕ ರತ್ನ ತಗದ ಕೊಡತಿದ್ದ ಬಾಲಕಂದನೋ ||೧೬||

ಸಮುದ್ರದಡದಲ್ಲಿ ಕೂತ ಸರ್ವಪ್ರಾಣಿ ಜೀವಿಗಳಿಗೆ ಸರ್ವ ಆಹಾರ ಕೊಡತಿದ್ದ ಬಾಲಕಂದನೋ ||೧೭||

ಆಹಾರ ಬೀರು ಕಾಲಕ್ಕ ಬೀರನೆಂದು ಹೆಸರ ಬಿತ್ತ ತಗದ ನೋಡ್ರಿ ಹಾಲಮತದ ಗ್ರಂಥವನೋ ||೧೮||

ಸೂರವ್ವನ ಮಗನೆಂದು ಸರ್ವಜನರು ಹೇಳತಾರ ಸುಳ್ಳೆಂದು ತಿಳಿಯಬಾರದ ವಿಪರೀತನೋ ||೧೯||

ಪರಮೇಶ್ವರನ ಗುಗ್ಗಳದ ಹೋಮದಲ್ಲಿ ಜನಿಸಿ ಬಂದ ಕಾಮಕಾಮ ಶಿವನ ಪುತ್ರ ಬಾಲಕಂದನೋ ||೨೦||

ಸಿದ್ಧಬೀರ ಗ್ರಂಥ ಕೇಳಿ ಶಾಂತದಿಂದ ಎಲ್ಲಾ ಮಂದಿ ಪ್ರೀತಿ ಹಿಡದ ನಡಿಯಬೇಕ್ರಿ ಮಾರ್ಗವನೋ ||೨೧||

ರಾಮಚಂದ್ರ ಬೀರಪ್ಪನ ಹಾಡಾ ಕೇಳಿ ಎಲ್ಲಾ ಮಂದಿ ಆನಂದಾಗಿ ಬಿಟ್ಟಾರ ಕುಸಿಯವನೋ ||೨೨||

**ಹೇಳಿದವರು: ಸಿದ್ದಪ್ಪ ಗುರುಪಾದಪ್ಪ ಪೂಜೇರ,** ವಯಸ್ಸು ೫೦

ಸಾ.ತಿಮ್ಮಾಪೂರ ತಾ.ಗೋಕಾಕ, ಜಿ: ಬೆಳಗಾವಿ

೮

कंबल्कि महिमा है न्यारी । — 

ಕಂಬಲ್ಕಿ ಮಹಿಮಾ ಹೈನ್ಯಾರೀ ।

ಧನೀ ದರಿದ್ರ ಸಭೀಕೋ ಪ್ಯಾರಿ

ಝಾಡೇ ಮೇ ವಹ್ ಪ್ರಾಣ ಬಚಾತಾ ।

ವರ್ಷಾ ಮೇ ಛಾತಾ ಬನ್‌ಜಾತಾ

ಗರ್ಮಿಮೇ ಸಬ್ ಲೋಗ್ ಬಿಚಾತೇ ।

ಖಟ್ಕೀ ರೋಮ್ಸೆ ಜಾನ್ ಬಚಾತೇ

ಪೂಜಾ ಪಾಠ್ ಉಸೀಪರ್ ಹೋತಾ ।

ಉಸ್ಕೋ ಧೋಬೀ ಕಭೀನ ಧೋತಾ

ಭೋಜನ್ಕಾ ಆಸನ್ ಹೈ ಪಾವನ್ ।

ಸಾಧು ಸಂತಕಾ ಶುದ್ಧ ಬಿಚಾವನ್

ಸಫರ್ ದೂರ್ಕಾ ಹೋಯದಿ ಭಾಯಿ ।

ತೋ, ಕಂಬಲ್ಸೆ ಕರೋ ಮಿಥಾಯಿ

ಚಾಹೇ ಜಹಾಂ ಬಿಚಾಕರ್ ಸೋವೋ ।

ಶುದ್ಧ ರಹೋ ಝಾಡೋಮತ್ ಧೋವೋ

ಕಂಬಲ್ ಜಿಸ್ಕೆ ಪಾಸ್ ನಹೀ ಹೈ ।

ಉಸ್ಕೋ ಕಹೀಂ ಸುಪಾಸ್ ನಹೀ ಹೈ

(ಭಾರತ ದೇಶದ ಕುರುಬರ ಚರಿತ್ರೆ, ಭಾಗ ೧, ಲೇ: ಶ್ರೀ ವಿ.ಆರ್.ಹನುಮಂತಯ್ಯ, ಪುಟ ೭೦)

೯

ಮೂಲಶಾಸ್ತ್ರದ ಮಜಕೂರ ಮಾಡಿ । ಹೇಳತೇವ ಕೇಳ್ರಿ ಚಿತ್ತ ಈ ಕಡಿ

ಜಾಡಿ ಹೆಂಗ ಹುಟ್ಟಿತಂತ । ಎಲ್ಲ ಹದ ಮಾಡಿ । ಬಲ್ಲವನಾವಲ್ಲ

ತಿಳಿದಷ್ಟು ಹೇಳುವೆ । ದೈವ ವಂದನೆ ಮಾಡಿ ॥ಪ॥

ಶಿವಪದ್ಮ ಹೊಂಟಾನ ಸುಮತಿಯ ಕೂಡಿ । ಲೋಕ ಗುರುವ ಬಂದ ಅಲ್ಲಗಿ ಓಡಿ ।

ಪದ್ಮಣ್ಣ ಗುರುವಿಗೆ ವಂದನೆ ಮಾಡಿ । ಗುರುವರೇವಣಸಿದ್ಧ ಅವರನ್ನ ಕೇಳ್ತಾನ

ನೀವೇ ಆಗ್ಬೇಕ ಜೋಡಿ ॥೧॥

ಪದ್ಮಣ್ಣ ಹೇಳ್ತಾನೋ ದೇಹ ಸಂಬಂದ್ಮಾಡಿ । ಗುರುವರ ಹೇಳ್ತಾನ ಅವರನ ನೋಡಿ ।

ನಿಮ್ಮಣ್ಣ ಸತಿಪತಿಯನು ಮಾಡೇ । ಒಪ್ಪಿಗಿ ತಗೊಂಡು ಲಗ್ನ ಮಾಡ್ಯಾರ

ರೇವಗಣರ ಕೂಡಿ ॥೨॥

ಅವರ ಉಪಜೀವನಕೊಂದು ಹಾದಿಯ ಮಾಡಿ | ಗುರುವರ್ಯ ಮನದಲ್ಲಿ |
ಯೋಚನೆ ಮಾಡಿ | ಹಣಿ ಬೆವರ ಒಗದಾನೋ ಭೂಮಿ ಕಡಿ |
ಹಣಿ ಬೆವರಿನಿಂದ ಬೈಲಗಂಬಾರ ಹುಟ್ಟಿ ಬಂದ ನೋಡಿ ||೩||

ಕತ್ರಿ ಮಾಡಂತವಗ ಅಪನಿಯ ಮಾಡಿ | ಮಾಡ್ಯಾನ ಕತ್ರಿ ತಿದ್ದಿ ಒಳೇ ತೀಡಿ |
ಜಗದ್ಗುರು ರೇವಣಸಿದ್ಧನು ನೋಡಿ| ಕುರಿಯ ಕತ್ರಿಸುವ ಕಲಿಸ್ಯಾನವಗ|
ಪದ್ಮಗೊಂಡಿನ ಮಾಡಿ ||೪||

ಚಿತ್ತಾ ಮನಿಸಿ ಗುರು ಬಿಲ್ಲವ ಮಾಡಿ | ಅದರಿಂದ ಉಣ್ಣಿ ಒಡದು ಹದ ಮಾಡಿ
ಹಂಜಿ ನೂಲ ತಯ್ಯಾರ ಮಾಡಿ | ಎಕ್ಕಿಯ ಗಿಡಕ ಮಗ್ಗ ಹೂಡಿ ನೇಯ್ದು |
ಝಾಡಿಯ ಮಾಡಿ ||೫||

ಗುರು ಶಿಷ್ಯರೆಂಬ ಎರಡು ಎಡಿಮಾಡಿ | ಆರು ಎಂಬ ಮತ್ತಲಿ ಕುರುವ ಮಾಡಿ
ಗುರು ಶಿಷ್ಯರಿಗೆ ತರುವಿನ ಜಾಡಿ | ಅದಾರ ಕೂಡಿ ಬಾಳಿರೆಂದು |
ಗುರುವ ರೇವಣಸಿದ್ಧ ಅವರಿಗಪ್ಪನ ಮಾಡಿ ||೬||

ಮಾಯವ್ವ ಮನಿಯಲಿ ಹಬ್ಬವ ಮಾಡಿ | ಗುರುವ ರೇವಣಸಿದ್ಧ
ಹಾಕಿಯ ಮಾಡಿ | ಬೀರಲಿಂಗಾದಾರನ ಮಾಡಿ | ಗುರುವ ರೇವಣಸಿದ್ಧ ಜಾಡಿ
ಕೊಟ್ಟಾನೋ | ಅವನ ಲಕ್ಷಣ ನೋಡಿ ||೭||

ಶಿವಸಿದ್ಧ ಬೀರಣ್ಣನಿಂದ ಬಂದ ಜಾಡಿ | ಮಾಳಪ್ಪಗಾದಿತೋ ಮಾಯದ ಜಾಡಿ |
ಮೇಲು ಕೀಳು ಕಿತ್ತ ಜಾಡಿ | ಜಗದಲಿ ಮೆರೆಯುವ ಜಗಜಗ ಹೊಳೆಯುವ
ಜಗಕ ಪ್ರಖ್ಯಾತ ಜಾಡಿ ||೮||

ಕವಿರತ್ನ ಸಿಂಗಾಡೆಪ್ಪಗೊಲಿದಿತೊ ಜಾಡಿ | ಬಸವಾರೂಢರಿಗೆ ಬಂದ ಜಾಡಿ
ಮನಸಿನ ಮೈಲಿಗಿ ತೊಳೆದ ಜಾಡಿ | ಬೇಡಿದ ಭಕ್ತರಿಗೆ ಬೇಡಿದ ಕೊಡುವಂಥ
ಜಾತ ಅರುವಿನ ಜಾಡಿ ||೯||

(ಡಾ.ವೀರೇಶ ಬಡಿಗೇರ, ಉತ್ತರ ಕರ್ನಾಟಕದ ಗೀತ ಮೇಳಗಳು, ಪುಟ ೪೬೬)

# ಅನುಬಂಧ ೧

## ಆಕರ ಗ್ರಂಥಗಳು


೧. ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು ಒಂದು ಸಾಂಸ್ಕೃತಿಕ ಅಧ್ಯಯನ (೧೯೯೯) ಡಾ.ವೀರೇಶ ಬಡಿಗೇರ, ವಿಮೋಚನಾ ಪ್ರಕಾಶನ ಅಥಣಿ.

೨. ಉತ್ತರ ಕರ್ನಾಟಕದ ಮದುವೆ ಸಂಪ್ರದಾಯಗಳು (೨೦೦೦) ಡಾ.ಎ.ಎಂ.ಸತ್ಯನಾಯಕ, ಚಂದ್ರಪ್ರಭಾ ಪ್ರಕಾಶನ, ಬಾಗಲಕೋಟೆ.

೩. ಕನ್ನಡ ನಿಘಂಟು, ಸಂಪುಟ: ೨ (೧೯೭೬) ಪ್ರ.ಸಂ.ಜಿ.ವೆಂಕಟಸುಬ್ಬಯ್ಯ, ಪ್ರ.ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.

೪. ಕನ್ನಡ ನಿಘಂಟು, ಸಂಪುಟ: ೩ (೧೯೭೭) ಪ್ರ.ಸಂ.ಜಿ.ವೆಂಕಟಸುಬ್ಬಯ್ಯ, ಪ್ರ.ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು -೧೮.

೫. ಕರ್ಣಾಟಕ ಭಾರತ ಕಥಾಮಂಜರಿ (೧೯೫೪) ಸಂ. ಕುವೆಂಪು, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪ್ರ.ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ.

೬. ಕರ್ನಾಟಕ ಜನಜೀವನ (೧೯೭೧) ಬೆಟಗೇರಿ ಕೃಷ್ಣಶರ್ಮಾ, ಪ್ರ.ಸಮಾಜ ಪುಸ್ತಕಾಲಯ, ಧಾರವಾಡ.

೭. ಕರ್ನಾಟಕ ಜಾನಪದ (೧೯೮೯) ಪ್ರ.ಸಂ.ಡಾ.ಎಸ್.ಕೆ.ಕರೀಂಖಾನ್, ಪ್ರ.ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು.

೮. ಕರ್ನಾಟಕದ ಕುರುಬರು (೧೯೯೩) ಡಾ.ಶಿವಾನಂದ ಗುಬ್ಬಣ್ಣವರ, ಅಕ್ಷಯ ಪ್ರಕಾಶನ, ಧಾರವಾಡ.

೯. ಕರ್ನಾಟಕದ ವಿಷಯ ವಿಶ್ವಕೋಶ (೨೦೦೫) ಕರ್ನಾಟಕ, ಸಂಪುಟ ೧, ಪ್ರ.ಸಂ. ಅರವಿಂದ ಮಾಲಗತ್ತಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೦. ಕರ್ನಾಟಕ ಸಂಸ್ಕೃತಿ ಸಮೀಕ್ಷೆ (೧೯೬೮) ಡಾ.ಎಚ್.ತಿಪ್ಪೇರುದ್ರಸ್ವಾಮಿ, ಪ್ರ.ಡಿ.ವಿ.ಕೆ.ಮೂರ್ತಿ ಮೈಸೂರು -೪.

೧೧. ಕುರುಬರ ಗುರು ಒಡೆಯರು (೨೦೦೭) ಸಂ.ಡಾ.ಎಫ್.ಟಿ.ಹಳ್ಳಿಕೇರಿ, ವಿಕಾಸ ಪ್ರಕಾಶನ ಎಂ.ಪಿ.ಪ್ರಕಾಶ ನಗರ, ಹೊಸಪೇಟೆ.

೧೨. ಕುರುಬರ ಗುರು ಒಡೆಯರು: ಸಾಂಸ್ಕೃತಿಕ ಅಧ್ಯಯನ (೨೦೦೭) ಡಾ.ಬಿ.ಜಿ.ಬಿರಾದಾರ, ಕರಡು ಪ್ರತಿ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಕುರುಬರ ಹೆಜ್ಜೆಗಳು (೨೦೦೬) ಚಂದ್ರಕಾಂತ ಬಿಜ್ಜರಗಿ, ಪ್ರ.ಹೇಮಕಾಂತ ಬಿಜ್ಜರಗಿ, ಶೈಲಚಂದ್ರ ಪ್ರಕಾಶನ, ವಿಜಾಪುರ-೩.

೧೪. ಕೌಟಿಲ್ಯನ ಅರ್ಥಶಾಸ್ತ್ರ (೧೯೭೨) ಅನು: ಕೆ.ಕೃಷ್ಣಭಟ್ಟ, ಪ್ರ.ಸಮಾಜ ಪುಸ್ತಕಾಲಯ, ಧಾರವಾಡ.

೧೫. ಗ್ರಾಮೀಣ ಗ್ರಹಿಕೆ (೨೦೦೦) ಡಾ.ಸಿ.ಕೆ.ನಾವಲಗಿ, ಭರತ ಪ್ರಕಾಶನ, ಗೋಕಾಕ.

೧೬. ಜನಪದ ಹಾಲುಮತ ಮಹಾಕಾವ್ಯ (೨೦೦೦) ಸಂ.ಡಾ.ವೀರಣ್ಣದಂಡೆ, ಪ್ರ.ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೭. ತಗರ ಪವಾಡ (೨೦೦೪) ಸಂ. ಡಾ.ಎಂ.ಎಂ.ಕಲಬುರ್ಗಿ, ಡಾ.ಸಿ.ಕೆ.ಪರಶುರಾಮಯ್ಯ, ಡಾ.ಎಫ್.ಟಿ.ಹಳ್ಳಿಕೇರಿ, ವಿದ್ಯಾನಿಧಿ ಪ್ರಕಾಶನ, ಗದಗ.

೧೮. ಪುರಂದರ ದಾಸರ ಪದಗಳು (೧೯೫೫) ಸಂ.ಎಸ್.ಎಸ್.ಕಾರಂತ, ಪ್ರ.ಎಸ್.ವ್ಹಿ.ಶ್ರೇಷ್ಠಿ ಹುಬ್ಬಳ್ಳಿ.

೧೯. ಬಸವಣ್ಣನವರ ವಚನ ಸಂಪುಟ (೧೯೯೩) ಸಂ.ಡಾ.ಎಂ.ಎಂ.ಕಲಬುರ್ಗಿ, ಪ್ರ.ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨೦. ಬಸವರಾಜ ದೇವರ ರಗಳೆ (೧೯೬೫) ಸಂ.ಟಿ.ಎಸ್.ವೆಂಕಣ್ಣಯ್ಯ, ವಾಣಿಪ್ರೆಸ್, ಮೈಸೂರು.

೨೧. ಭಾರತ ದೇಶದ ಕುರುಬರ ಚರಿತ್ರೆ (೧೯೫೮) ವ್ಹಿ.ಆರ್.ಹನುಮಂತಯ್ಯ.

೨೨. ಮನುಸ್ಮೃತಿ (೧೯೮೨) ಅನು: ಚಕ್ರಕೋಡಿ ಈಶ್ವರಶಾಸ್ತ್ರಿ ಪ್ರ.ಸಮಾಜ ಪುಸ್ತಕಾಲಯ, ಧಾರವಾಡ.

೨೩. ಮೋಹನ ತರಂಗಿಣಿ ಸಂಗ್ರಹ (೧೯೬೮) ಸಂ.ಬಿ.ಎಸ್.ಸಣ್ಣಯ್ಯ, ಪ್ರ.ಗೀತಾ ಬುಕ್ ಹೌಸ್, ಮೈಸೂರು.

೨೪. ವಿಜಾಪುರ ಜಿಲ್ಲೆ ಗ್ಯಾಝೆಟಿಯರ್ (೧೯೯೯) ಪ್ರ.ಸಂ. ಡಾ.ಆರ್.ಮುನಿಸ್ವಾಮಿ, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ.

೨೫. ವಿಶ್ವಕೋಶ-೨ ಸಂ. ಕರೀಗೌಡ ಬೀಚನಹಳ್ಳಿ, ಪ್ರ.ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ವೋಲ್ಗಾ-ಗಂಗಾ (೧೯೮೧) ಮೂಲ: ರಾಹುಲ ಸಾಂಕೃತ್ಯಾಯನ, ಅನು: ಬಿ.ಎಂ.ಶರ್ಮಾ, ನವಕರ್ನಾಟಕ ಪಬ್ಲಿಕೇಷನ್ಸ್ (ಪ್ರೈ) ಲಿಮಿಟೆಡ್ ಬೆಂಗಳೂರು-೯.

೨೭. ಶಂ.ಬಾ.ಕೃತಿ ಸಂಪುಟ ೧-೩ (೧೯೯೯) ಸಂ. ಮಲ್ಲೇಪುರಂ ಜಿ.ವೆಂಕಟೇಶ, ಪ್ರ.ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೮. ಶಾಸನಗಳಲ್ಲಿ ಕರ್ನಾಟಕದ ವರ್ತಕರು (೧೯೮೬) ಡಾ.ಬಿ.ಆರ್.ಹಿರೇಮಠ, ಪ್ರ.ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೯. ಶ್ರೀ ವಿಠ್ಠಲ : ಒಂದು ಮಹಾ ಸಮನ್ವಯ (೨೦೦೨) ಮೂಲ: ರಾ.ಚಿಂ.ಢೇರೆ, ಅನು: ಚಂದ್ರಕಾಂತ ಪೋಕಳೆ, ಪ್ರ. ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩೦. ಸಿಂಹನ ನಾಮ ಲಿಂಗಾನುಶಾಸನ ಅಥವಾ ಅಮರಕೋಶ (೧೯೯೬) ವಿದ್ವಾನ ಎನ್.ರಂಗನಾಥ ಶರ್ಮಾ, ಸುವಿದ್ಯಾ ಪ್ರಕಾಶನ, ಬೆಂಗಳೂರು-೪.

೩೧. ಸಿದ್ಧಮಂಕ ಚರಿತೆ (೨೦೦೪) ಸಂ.ಡಾ.ಎಂ.ಎಂ.ಕಲಬುರ್ಗಿ, ಡಾ.ವೈ.ಸಿ.ಭಾನುಮತಿ, ಪ್ರ.ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀಜಗದ್ಗುರು ತೋಂಟದಾರ್ಯ ಮಠ, ಗದಗ.

೩೨. ಹಾಲಕೆನೆ (೨೦೦೨) ಪ್ರ.ಸಂ.ಡಾ.ಶ್ರೀರಾಮ ಇಟ್ಟಣ್ಣವರ, ಪ್ರ.ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ ವಿಜಾಪುರ.

೩೩. ಹಾಲ್ಮತೋತ್ತೇಜಕ ಪುರಾಣ (೧೯೮೨) ರಸ್ತಾಪುರ ಭೀಮಕವಿ, ಸಂ.ಭಾಗೂತನಯ ನವಿಲೂ, ಶಶಿಕಲಾ ಪ್ರಕಾಶನ, ಗಾಂಧಿನಗರ-೯.

೩೪. ಹಾಲುಮತ ಪುರಾಣವು (೧೯೫೫) ಪಂ.ಎ.ಎಂ.ಚನ್ನಬಸವ ಶಾಸ್ತ್ರಿಗಳು, ಪ್ರ.ಶ್ರೀಮದಭಿನವ ರೇಣುಕ ಗುರು ಕುಲಾಶ್ರಮದ ಸದ್ಭಕ್ತರು, ಚಿಕ್ಕಬೂದಿಹಾಳ, ತಾ.ದಾವಣಗೆರೆ.

## ಲೇಖನಗಳು

೧. ಹಾಲುಮತ ಕುರಿತು ಒಂದು ವಿಶಿಷ್ಟ ಕೃತಿ: ಸಿದ್ಧಮಂಕ ಚರಿತೆ, ಡಾ.ಎಫ್.ಟಿಹಳ್ಳಿಕೇರಿ, ಪತ್ರಿಕೆ ಪ್ರಸಾದ:

೨. ಬೂದಿಹಾಳದ ಬೆಚ್ಚನೆಯ ಕಂಬಳಿ, ಲೇಖಕರು: ವೀರೇಂದ್ರ ಶೀಲವಂತ, ಪ್ರಜಾವಾಣಿ-ವಾಣಿಜ್ಯ ಪುರವಣಿ ೧೦.೧೦. ೨೦೦೧.

೩. ಕುಂದರಗಿಯ ಬೆಚ್ಚನೆಯ ಕಂಬಳಿಗಳು, ದೊಡ್ಡಣ್ಣ ಗದ್ದನಕೇರಿ, ಕರ್ಮವೀರ.

೪. ಬೂದಿಹಾಳದ ಕಂಬಳಿಗೆ ಬೇಕು ತಂತ್ರಜ್ಞಾನ, ದೊಡ್ಡಣ್ಣ ಗದ್ದನಕೇರಿ, ಸುಧಾ ೨೫-೧೦-೨೦೦೧.

೫. ಕಂಬಳಿ ನೇಯುವ ಕೈಯಲ್ಲಿ ಕತ್ತಾಳೆ ನಾರಿನ ಹಗ್ಗ ತಯಾರಿಕೆ, ಸಿದ್ಧರಾಮ ಹಿರೇಮಠ, ಪ್ರಜಾವಾಣಿ, ವಾಣಿಜ್ಯ ಪುರವಣಿ ೧೬-೧-೨೦೦೮.

# ಅನುಬಂಧ ೨

## ವಕ್ತೃ ವಿವರಗಳು

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೧. | ಚನ್ನಪ್ಪ ಬೀರಪ್ಪ ಯಡಹಳ್ಳಿ | ೭೨ | ಕಂಬಳಿ ನೇಕಾರಿಕೆ | ಬೂದಿಹಾಳ, ಬೀಳಗಿ, ಬಾಗಲಕೋಟೆ |
| ೨. | ತಿಮ್ಮಪ್ಪ ಹನಮಪ್ಪ ಕೈಯಿನಕಟ್ಟಿ | ೪೦ | ಕಂಬಳಿ ನೇಕಾರಿಕೆ | ಬೂದಿಹಾಳ, ಬೀಳಗಿ, ಬಾಗಲಕೋಟೆ |
| ೩. | ರಾಮಪ್ಪ ಅಡಿವೆಪ್ಪ ಗೌಡರ | ೭೫ | ಕಂಬಳಿ ನೇಕಾರಿಕೆ | ಬೂದಿಹಾಳ, ಬೀಳಗಿ, ಬಾಗಲಕೋಟೆ |
| ೪. | ಶಿವಪ್ಪ ಬಾಲಪ್ಪ ಯಡಹಳ್ಳಿ | ೫೦ | ಕಂಬಳಿ ನೇಕಾರಿಕೆ | ಬೂದಿಹಾಳ, ಬೀಳಗಿ, ಬಾಗಲಕೋಟೆ |
| ೫. | ಯಮುನವ್ವ ಭೀಮಪ್ಪ ಕುರಿ | ೫೮ | ಮನೆಗೆಲಸದೊಂದಿಗೆ ಕಂಬಳಿ ಉದ್ಯೋಗದಲ್ಲಿ ಸಹಾಯ | ಬೂದಿಹಾಳ, ಬೀಳಗಿ ಬಾಗಲಕೋಟೆ |
| ೬. | ಶಂಕ್ರಪ್ಪ | ೫೮ | ಮನೆಗೆಲಸದೊಂದಿಗೆ ಕಂಬಳಿ ಉದ್ಯೋಗದಲ್ಲಿ ಸಹಾಯ | ಬೂದಿಹಾಳ, ಬೀಳಗಿ, ಬಾಗಲಕೋಟೆ |
| ೭. | ಸುಭಾಷ್ ಚನ್ನಪ್ಪ ಯಡಹಳ್ಳಿ | ೪೦ | ಕಂಬಳಿ ನೇಕಾರಿಕೆ | ,, |
| ೮. | ಶಿವಪ್ಪ ಯಲ್ಲಪ್ಪ ಶಿರೋಳ | ೭೦ | ,, | ,, |
| ೯. | ಕರಿಯಪ್ಪ ದೂಸಂಗೆಪ್ಪ ಹಾದಿಮನಿ | ೫೬ | ಕಾರ್ಯದರ್ಶಿಗಳು, ಕುರುಬರ ಉಣ್ಣೆ ಉತ್ಪಾದಕರ ಸಹಕಾರಿ ಸಂಘ, ಬೂದಿಹಾಳ, ಬೀಳಗಿ | ,, |

| | | | | |
|---|---|---|---|---|
| ೧೦. | ಲಕ್ಷ್ಮಪ್ಪ ಗಿರಿಯಪ್ಪ ಗಾಜಪ್ಪನವರ | ೪೫ | ಕಂಬಳಿ ನೇಕಾರಿಕೆ | ಕುಂದರಗಿ |
| ೧೧. | ಅಮೋಗೆಪ್ಪಾ ಮಹಾದೇವಪ್ಪಾ ಒಡೆಯರ | ೭೨ | ಒಡೆಯರು | ಕುಂಚನೂರು, ಜಮಖಂಡಿ |
| ೧೨. | ಜಿ.ಆರ್.ದೊರೆಗೋಳ | ೫೦ | ಕಾರ್ಯದರ್ಶಿಗಳು ಉಣ್ಣೆ ಉತ್ಪಾದಕರ ಸಹಕಾರಿ ಸಂಘ, ಕುಂದರಗಿ | ಕುಂದರಗಿ |
| ೧೩. | ಪಾರ್ವತೆವ್ವ ಕುಂಬಾರ | ೭೫ | ಗೃಹಿಣಿ | ಬಾಡಗಿ, ಬೀಳಗಿ |
| ೧೪. | ಬಸವ್ವ ಮೋದಿ | ೫೨ | ,, | ಬಸವ ಹಂಚನಾಳ, ಬೀಳಗಿ |
| ೧೫. | ಮೀನಾಕ್ಷಿ ಕೊತ್ತಲಮಠ | ೫೦ | ,, | ಬೀಳಗಿ, ಬಾಗಲಕೋಟ |
| ೧೬. | ಉಮಾ ಕುಂಬಾರ | ೪೨ | ,, | ಬಾನುವಳಿ, ದಾವಣಗೆರೆ |
| ೧೭. | ಸವಿತಾ ಅಡಕೆ | ೩೧ | ,, | ನಾಗರಾಳ, ಮುಧೋಳ |
| ೧೮. | ಗೌರವ್ವ ವಿಠ್ಠಲ ಗಲಗಲಿ | ೫೦ | ,, | ಬಸವ ಹಂಚನಾಳ, ಬೀಳಗಿ |
| ೧೯. | ಸಿದ್ಧಪ್ಪ ಸಾಬಣ್ಣ ಬಿದರಿ | ೫೦ | ಕೃಷಿ | ಬೀಳಗಿ, ಬಾಗಲಕೋಟ |
| ೨೦. | ಪಿ.ಎಸ್.ಸರವರ | ೫೦ | ವಕೀಲರು | ಮುಗಳಖೋಡ, ಮುಧೋಳ |
| ೨೧. | ವಿಠ್ಠಲ ಯಂಕಪ್ಪ ಜಡಿಯಮ್ಮನವರ | ೪೦ | ನೇಕಾರಿಕೆ | ಬೂದಿಹಾಳ, ಬೀಳಗಿ |

